# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2075 |
| ವಿಧಾನ ಪರಿಷತ್ ಸದಸ್ಯರು | ಶ್ರೀ ಕೆ.ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 24.03.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಂದಾಯ ಇಲಾಖೆಯಲ್ಲಿ ಪೋಡಿ ಮುಕ್ತ ಗ್ರಾಮ ಯೋಜನೆಯನ್ನು ಯಾವಾಗ ಪ್ರಾರಂಭಿಸಲಾಯಿತು; ಈ ಕಾರ್ಯಕ್ರಮದ ಮಾರ್ಗಸೂಚಿ ಯಾವುದು; (ಸರ್ಕಾರದ ಆದೇಶ ಮಾರ್ಗಸೂಚಿಯ ಪ್ರತಿಯನ್ನು ಒದಗಿಸುವುದು) | ರಾಜ್ಯದಲ್ಲಿ ಪೋಡಿ ಮುಕ್ತ ಗ್ರಾಮ ಯೋಜನೆಯನ್ನು ಮಾಹೆ ಸೆಪ್ಟಂಬರ್-2015 ರಲ್ಲಿ ಪ್ರಾರಂಭಿಸಲಾಗಿರುತ್ತದೆ. ಭೂಮಾಪನ ಇಲಾಖೆಯ ಸುತ್ತೋಲೆ ಸಂಖ್ಯೆ: SSLR/TNL/Misc/ Misc-182/2014-15 ದಿನಾಂಕ 03-09-2015ರಲ್ಲಿ ಈ ಯೋಜನೆಯ ಅನುಷ್ಠಾನದ ಕುರಿತು ವಿವರವಾದ ಮಾರ್ಗಸೂಚಿಗಳನ್ನು ರೂಪಿಸಿದ್ದು, ಸದರಿ ಸುತ್ತೋಲೆಯನ್ನು **ಅನುಬಂಧ-1**ರಲ್ಲಿರಿಸಿದೆ. |
| ಆ) | ಉಡುಪಿ ಜಿಲ್ಲೆಯಲ್ಲಿ ಪೋಡಿ ಮುಕ್ತ ಗ್ರಾಮ ಯೋಜನೆಯನ್ನು ಯಾವ ಯಾವ ಗ್ರಾಮಗಳಲ್ಲಿ ನಡೆಸಲಾಗಿದೆ; ಅಲ್ಲಿ ಸಲ್ಲಿಕೆಯಾದ ಅರ್ಜಿಗಳ ಸಂಖ್ಯೆ ಎಷ್ಟು; ಪೋಡಿಯಾದ ಪ್ರಕರಣಗಳ ಸಂಖ್ಯೆ ಎಷ್ಟು; ಬಾಕಿ ಇರುವ ಪ್ರಕರಣಗಳ ಸಂಖ್ಯೆ ಎಷ್ಟು; ಬಾಕಿ ಇರಲು ಕಾರಣಗಳೇನು; | ಉಡುಪಿ ಜಿಲ್ಲೆಯಲ್ಲಿ 68 ಗ್ರಾಮಗಳನ್ನು ಪೋಡಿ ಮುಕ್ತ ಗ್ರಾಮ ಯೋಜನೆಯಡಿ ಅಳತೆಗಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಯೋಜನೆಯಡಿ ರೈತರಿಂದ ಯಾವುದೇ ಅರ್ಜಿ ಮತ್ತು ಶುಲ್ಕ ಪಡೆಯದೆ ಸರ್ಕಾರದ ವತಿಯಿಂದ ಸ್ವಯಂ ಪ್ರೇರಿತವಾಗಿ ಅಳತೆ ಕಾರ್ಯ ಕೈಗೊಳ್ಳಲಾಗುವುದು.<br>ಅದರಂತೆ ಈ 68 ಗ್ರಾಮಗಳಲ್ಲಿ ಸ್ವಯಂ ಪ್ರೇರಿತವಾಗಿ ಒಟ್ಟು 66,608 ಬ್ಲಾಕ್‌ಗಳನ್ನು ಅಳತೆಗೆ ಆಯ್ಕೆ ಮಾಡಿಕೊಂಡಿದ್ದು, ಈ ಪೈಕಿ 45,311 ಬ್ಲಾಕ್‌ಗಳಲ್ಲಿ ಅಳತೆ ಕಾರ್ಯ ಪೂರೈಸಲಾಗಿದೆ. ಇನ್ನು 21,297 ಬ್ಲಾಕ್‌ಗಳಲ್ಲಿ ಅಳತೆಗಾಗಿ ಬಾಕಿ ಇರುತ್ತವೆ. ವಿವರವನ್ನು **ಅನುಬಂಧ-2** ರಲ್ಲಿ ನೀಡಿದೆ.<br>ಈ ಕೆಳಕಂಡ ಕಾರಣಗಳಿಂದ ಪ್ರಕರಣಗಳು ಬಾಕಿ ಉಳಿದಿರುತ್ತವೆ:-<br>1) ಆಕಾರಬಂದನಂತೆ ಪಹಣಿಯ ವಿಸ್ತೀರ್ಣದಲ್ಲಿ ವ್ಯತ್ಯಾಸ ವಿರುವುದರಿಂದ.<br>2) ಪಹಣಿಯ ಕಾಲ 3 ಮತ್ತು 9 ವಿಸ್ತೀರ್ಣದಲ್ಲಿ ವ್ಯತ್ಯಾಸವಿರುವುದರಿಂದ.<br>3) ಭೂಸುಧಾರಣಾ ಆದೇಶ ಮತ್ತು ಅನುಭವದ ವಿಸ್ತೀರ್ಣದಲ್ಲಿ ವ್ಯತ್ಯಾಸವಿರುವುದರಿಂದ.<br>4) ಅಳತೆ ವೇಳೆ ತಕರಾರು ಉಂಟಾಗಿರುವುದರಿಂದ.<br>5) ಜಮೀನು ಕುರಿತು ನ್ಯಾಯಾಲಯದಲ್ಲಿ ದಾವಾಗಳಿರುವುದರಿಂದ.<br>6) ದಾಖಲೆ ಶಿಥಿಲವಾಗಿರುವುದರಿಂದ<br><br>ಇತ್ಯಾದಿ ತಾಂತ್ರಿಕ ಕಾರಣಗಳಿಂದ ಅಳತೆ ಕಾರ್ಯ ಪೂರೈಸಲು ಸಾದ್ಯವಾಗಿರುವುದಿಲ್ಲ. |

| | | |
|---|---|---|
| ಇ) | ಉಡುಪಿ ಜಿಲ್ಲೆಯಲ್ಲಿ ಪೋಡಿ ಮುಕ್ತ ಗ್ರಾಮ ಕಾರ್ಯಕ್ರಮವನ್ನು ಆಯೋಜಿಸಲು ಬಾಕಿ ಇರುವ ಗ್ರಾಮಗಳು ಯಾವುವು; ಬಾಕಿ ಇರಲು ಕಾರಣವೇನು; ಈ ಕಾರ್ಯಕ್ರಮವನ್ನು ಯಾವ ಕಾಲಮಿತಿಯೊಳಗೆ ಪೂರ್ಣಗೊಳಿಸಲಾಗುವುದು. | ಉಡುಪಿ ಜಿಲ್ಲೆಯಲ್ಲಿ ಪೋಡಿ ಮುಕ್ತ ಗ್ರಾಮ ಯೋಜನೆಯಡಿ ಅಳತೆಗಾಗಿ ಆಯ್ಕೆ ಮಾಡಿಕೊಳ್ಳಲು 199 ಗ್ರಾಮಗಳು ಬಾಕಿ ಇರುತ್ತವೆ, ಗ್ರಾಮಗಳ ವಿವರವನ್ನು **ಅನುಬಂಧ-3** ರಲ್ಲಿ ಲಗತ್ತಿಸಿದೆ.<br>ಪೋಡಿ ಮುಕ್ತ ಗ್ರಾಮ ಯೋಜನೆಯನ್ನು ಸಾರ್ವಜನಿಕರ ದೈನಂದಿನ ಕೆಲಸಗಳಿಗಾಗಿ ಅಳತೆ ಕೋರಿ ಸಲ್ಲಿಸುವ 11ಇ(ಅನ್ಯಕ್ರಾಂತ), ತತ್ಕಾಲ್ ಪೋಡಿ, ಹದ್ದುಬಸ್ತು, ಇತ್ಯಾದಿ ಅರ್ಜಿಗಳ ವಿಲೇವಾರಿಗೆ ತೊಂದರೆಯಾಗದಂತೆ, ಲಭ್ಯವಿರುವ ಸರ್ಕಾರಿ ಮತ್ತು ಪರವಾನಗಿ ಭೂಮಾಪಕರನ್ನು ಬಳಸಿಕೊಂಡು ಅಳತೆ ಕಾರ್ಯ ಕೈಗೊಳ್ಳಲಾಗುತ್ತಿದೆ. ಭೂಮಾಪಕರ ಲಭ್ಯತೆಯ ಮೇರೆಗೆ ವಿಧಾನ ಸಭೆ ಕ್ಷೇತ್ರವಾರು ಹಂತ ಹಂತವಾಗಿ ಕನಿಷ್ಠ 10 ಗ್ರಾಮಗಳನ್ನು ಅಳತೆಗೆ ಆಯ್ಕೆ ಮಾಡಿಕೊಂಡು ಪೋಡಿ ಮುಕ್ತಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

**ಸಂಖ್ಯೆ: ಕಂಇ 70 ಎಸ್ಎಸ್‌ಸಿ 2021**

**(ಆರ್.ಅಶೋಕ)**
ಕಂದಾಯ ಸಚಿವರು

ಪ್ರಶ್ನೆ ಸಂಖ್ಯೆ 2075 ರ ಅನುಬಂಧ - 1



ಕರ್ನಾಟಕ ಸರ್ಕಾರ

No. SSLR/TNL / Misc/Misc-182/14-15

ಆಯುಕ್ತರ ಕಚೇರಿ,
ಭೂಮಾಪನ,ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳ ಇಲಾಖೆ , ಕೆ. ಆರ್ ವೃತ್ತ,
ಬೆಂಗಳೂರು, ದಿನಾಂಕ 03-09-2015

ಸುತ್ತೋಲೆ

ವಿಷಯ ಪೋಡಿ ಮುಕ್ತ ಅಭಿಯಾನ ಕೈಗೊಳ್ಳುವ ಸಮಯದಲ್ಲಿ ಅನುಸರಿಸಬೇಕಾದ ಮಾರ್ಗಸೂಚಿಗಳು

ಈ ಸಾಲಿನ ಬಜೆಟ್ ನಲ್ಲಿ ಘೋಷಿಸಲಾಗಿರುವ "ಪೋಡಿ ಮುಕ್ತ ಅಭಿಯಾನ" ವನ್ನು ಪ್ರಾರಂಭಿಸಲು ಉದ್ದೇಶಿಸಿದ್ದು, ಸದರಿ ಅಭಿಯಾನವನ್ನು ಪ್ರಾರಂಭಿಸಲು ಅವಶ್ಯಕವಿರುವ ಸಿಬ್ಬಂದಿ ನಿಯೋಜಿಸಿ ಹಾಗೂ ಗ್ರಾಮಗಳನ್ನು ಆಯ್ಕೆ ಮಾಡಿ ಸೆಪ್ಟೆಂಬರ್ 2 ನೇ ವಾರದಿಂದ ಪ್ರಾರಂಭಿಸಲು ಕಾರ್ಯಕ್ರಮ ರೂಪಿಸಲಾಗಿದೆ. ಈ ಕಾರ್ಯಕ್ರಮದಲ್ಲಿ ಬಹುಮಾಲೀಕತ್ವದ ಖಾಸಗಿ /ಹಿಡುವಳಿ ಜಮೀನುಗಳನ್ನು ಅಳತೆಗೆ ಒಳಪಡಿಸಿ ಏಕಮಾಲೀಕತ್ವಕ್ಕೆ ಪರಿವರ್ತಿಸಲು ಮ್ಯುಟೇಷನ್ ಪೋಡಿ ಕಾರ್ಯವನ್ನು ಅಭಿಯಾನದ ಮೂಲಕ ಕೈಗೊಳ್ಳಲಾಗುವುದು.ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಈ ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ಪಾಲಿಸಲು ಸೂಚಿಸಿದೆ.

1. ಭೂಮಿ ಮಾಹಿತಿಕೋಶದಿಂದ ಆಯ್ಕೆ ಮಾಡಲಾದ ಗ್ರಾಮಗಳ ಎಲ್ಲಾ ಪಹಣಿಗಳನ್ನು ಮತ್ತು ಬಹುಮಾಲೀಕತ್ವದ ಪಹಣಿಗಳಿಗೆ ಸಂಬಂಧಿಸಿದ ಮ್ಯುಟೇಷನ್ ಪ್ರತಿಯನ್ನು ಪಡೆದುಕೊಳ್ಳುವುದು. ಭೂಮಿ ಉಸ್ತುವಾರಿ ಕೋಶದಿಂದ ಸಂಬಂಧಪಟ್ಟ ತಾಲ್ಲೂಕುಗಳಿಗೆ ಆಯ್ಕೆ ಮಾಡಲಾದ ಗ್ರಾಮಗಳ ಪಹಣಿ ಮತ್ತು ಮ್ಯುಟೇಷನ್ ಗಳನ್ನು ಉಚಿತವಾಗಿ ಒದಗಿಸಲು ಸೂಚನೆ ನೀಡಲಾಗುವುದು.
2. ಗ್ರಾಮಕ್ಕೆ ಸಂಬಂಧಿಸಿದ ಪಹಣಿಗಳನ್ನು ಆಕಾರಬಂದ್ ನೊಂದಿಗೆ ಹೋಲಿಕೆ ಮಾಡಿ ಖಾಸಗಿ ಮಾಲೀಕತ್ವದ ಪೈಕಿ ಪಹಣಿಗಳನ್ನು ಪ್ರತ್ಯೇಕವಾಗಿ ಪಟ್ಟಿ ಮಾಡಿಕೊಳ್ಳುವುದು ಮತ್ತು ಈ ಪೈಕಿ ಪಹಣಿಗಳನ್ನು ಸಹ ಪೋಡಿ ಮುಕ್ತ ಅಭಿಯಾನಕ್ಕೆ ಒಳಪಡಿಸುವುದು. ಈ ಮೂಲಕ ಪೈಕಿ ಪಹಣಿಗಳನ್ನು ಸಹ ಪೋಡಿ ಮೂಲಕ ಏಕ ಮಾಲೀಕತ್ವದ ಪಹಣಿಯಾಗಿ ಪರಿವರ್ತಿಸಲು ಕ್ರಮ ಜರುಗಿಸುವುದು.
3. ಆಕಾರಬಂದ್ ಮತ್ತು ಪಹಣಿಗಳನ್ನು ಪರಿಶೀಲಿಸುವ ಸಮಯದಲ್ಲಿ ಈಗಾಗಲೇ ಪೋಡಿ ಮೂಲಕ ದುರಸ್ತಿಯಾಗಿದ್ದು ಪಹಣಿಯಲ್ಲಿ ಇಂಡೀಕರಣವಾಗಿಲ್ಲದ ಪ್ರಕರಣಗಳನ್ನು ಪಟ್ಟಿ ಮಾಡಿ ಇವುಗಳನ್ನು ಇಂಡೀಕರಣ ಮಾಡಲು ಭೂಮಿ ಶಾಖೆಗೆ ನೀಡಿ ಇಂಡೀಕರಣ ಪೂರ್ಣಗೊಳಿಸುವುದು.
4. ಪ್ರತಿ ಸರ್ವೆ ನಂಬರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಕಡತ ನಿರ್ವಹಿಸುವುದು.
5. ಕೇಂದ್ರ ಕಚೇರಿಯಿಂದ ಯೋಜನೆಗಾಗಿ ನಿಯೋಜಿಸಿರುವ ನಾಲ್ಕು ಭೂಮಾಪಕರನ್ನು ಒಂದೇ ತಂಡವನ್ನಾಗಿ ಪರಿಗಣಿಸಿ ಯೋಜನೆಯನ್ನು ಗ್ರಾಮವಾರು ಪ್ರಾರಂಭಿಸಿ ಒಂದು ಗ್ರಾಮದ ಕೆಲಸ ಪೂರ್ಣಗೊಂಡ ನಂತರ ಮತ್ತೊಂದು ಗ್ರಾಮದ ಕಾರ್ಯ ಪ್ರಾರಂಭಿಸುವುದು. ಪ್ರತಿ ಗ್ರಾಮಕ್ಕೂ ಪ್ರತ್ಯೇಕವಾಗಿ ಒಬ್ಬ ಭೂಮಾಪಕರಂತೆ ನಿಯೋಜಿಸಬಾರದು.

6. ಈ ಯೋಜನೆಯ ಅನುಷ್ಠಾನಕ್ಕೆ ಕಂದಾಯ ಇಲಾಖೆಯ ಉಪವಿಭಾಗಾಧಿಕಾರಿಗಳು, ತಹಶೀಲ್ದಾರ್ ರವರು office R. ಯೋಜನೆ ಅನುಷ್ಠಾನಗೊಳ್ಳುತ್ತಿರುವ ಗ್ರಾಮದ ಕಂದಾಯ ನಿರೀಕ್ಷಕರು, ಗ್ರಾಮ ಲೆಕ್ಕಾಧಿಕಾರಿಗಳು, ಗ್ರಾಮ ಸಹಾಯಕರು, ಭೂದಾಖಲೆಗಳ ಉಪ ನಿರ್ದೇಶಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರು ಈ ಯೋಜನೆಗೆ ನಿಯೋಜಿಸ್ಪಟ್ಟ ಪರ್ಯಾವೇಕ್ಷಕರು ಮತ್ತು ಭೂಮಾಪಕರುಗಳ ತಂಡವನ್ನು ಒಳಗೊಂಡ ಸಮಿತಿಯೊಂದನ್ನು ರಚಿಸಿಕೊಳ್ಳುವುದು. ಈ ಯೋಜನೆಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳನ್ನು ಈ ಸಮಿತಿಯಲ್ಲಿ ಚರ್ಚಿಸಿ ಕಾರ್ಯಗತಗೊಳಿಸುವುದು.
7. ಕಂದಾಯ ಮತ್ತು ಭೂಮಾಪನ ಅಧಿಕಾರಿಗಳ ಸಮಿತಿಯನ್ನು ಒಳಗೊಂಡಂತೆ ಗ್ರಾಮಸಭೆಯನ್ನು ಏರ್ಪಡಿಸಿ ಗ್ರಾಮಸ್ಥರಿಗೆ **"ಪೋಡಿ ಮುಕ್ತ ಅಭಿಯಾನ"** ಉದ್ದೇಶ ಮತ್ತು ಚಟುವಟಿಕೆಗಳ ಬಗ್ಗೆ ಮಾಹಿತಿಯನ್ನು ಒದಗಿಸುವುದು.
8. ಈಗಾಗಲೇ ಸ್ಕ್ಯಾನ್ ಮಾಡಲಾಗಿರುವ ಟಿಪ್ಪಣಿ, ಅಟ್ಲಾಸ್, ಪ್ರತಿ ಮತ್ತು ಇತರೆ ಅವಶ್ಯಕ ಭೂದಾಖಲೆಗಳನ್ನು ಸ್ಕ್ಯಾನ್ ದಾಖಲೆಗಳ ಮಾಹಿತಿಕೋಶದಿಂದ ಪಡೆದುಕೊಳ್ಳುವುದು.
9. ಪರ್ಯಾವೇಕ್ಷಕರು "ಪೋಡಿ ಮುಕ್ತ ಅಭಿಯಾನ"ಕ್ಕೆ ನಿಯೋಜಿಸಲಾಗಿರುವ ಎಲ್ಲಾ ಭೂಮಾಪಕರಿಗೂ ಕೆಲಸವನ್ನು ಸಮವಾಗಿ ಹಂಚುವುದು.
10. ಅಳತೆ ಕೆಲಸ ಪ್ರಾರಂಭಿಸುವ ಮೊದಲು ಬಹುಮಾಲೀಕತ್ವದ ಎಲ್ಲಾ ಸರ್ವೆ ನಂಬರುಗಳ ಪ್ರಮಾಣಕ್ಕನುಗುಣವಾಗಿ ತಯಾರಿಸಿದ ನಕ್ಷೆಯನ್ನು (Scale drawn sketch) ಕಡ್ಡಾಯವಾಗಿ ತಯಾರಿಸಿಕೊಳ್ಳುವುದು.
11. ಗ್ರಾಮಸಭೆಯಲ್ಲಿ ಭೂಮಾಪಕರ ಪ್ರತಿದಿನದ ಚಟುವಟಿಕೆಗಳನ್ನು ಘೋಷಿಸುವುದು ಹಾಗೂ ಗ್ರಾಮದ ಚಾವಡಿಯಲ್ಲಿ ಕಾರ್ಯಕ್ರಮ ಪಟ್ಟಿಯನ್ನು ಪ್ರದರ್ಶಿಸುವುದು. ಗ್ರಾಮಸಭೆಯಲ್ಲಿಯೇ ಅಳತೆ ಬಗ್ಗೆ ನೋಟೀಸನ್ನು ತಯಾರಿಸಿ ಸಂಬಂಧಿಸಿದ ಪಹಣಿದಾರರಿಗೆ ಜಾರಿ ಮಾಡುವುದು. ಬಹುಮಾಲೀಕತ್ವದ ಪಹಣಿಯಲ್ಲಿನ ಕಾಲಂ ೯ ರ ಎಲ್ಲಾ ಹಕ್ಕುದಾರರಿಗೂ ಕಡ್ಡಾಯವಾಗಿ ನೋಟೀಸು ಜಾರಿಮಾಡುವುದು. ನೋಟೀಸ ಜಾರಿ ಮಾಡಲು ಗ್ರಾಮ ಸಹಾಯಕರು ಕಡ್ಡಾಯವಾಗಿ ಸಹಕರಿಸುವಂತೆ ಕಂದಾಯಾಧಿಕಾರಿಗಳು ಸೂಚಿಸುವುದು.
12. ಅಳತೆ ಕಾರ್ಯವನ್ನು ಬೆಳಗಿನ ಸಮಯದಲ್ಲಿ ಕಾರ್ಯಕ್ರಮ ಪಟ್ಟಿಯಂತೆ ಕೈಗೊಳ್ಳುವುದು. ಮಧ್ಯಾಹ್ನದ ಸಮಯ ಅಳತೆ ಮಾಡಲಾದ ಸರ್ವೆ ನಂಬರಿನ ಪೋಡಿ ಕಡತಗಳನ್ನು ಸಿದ್ಧಪಡಿಸುವುದು. ಅದೇ ದಿನ ಕಡತ ತಯಾರಿಕೆ ಕೆಲಸ ನಿರ್ವಹಿಸಲು ಅನಾನುಕೂಲವಿದ್ದಲ್ಲಿ ಸಂದರ್ಭಾನುಸಾರ ಗರಿಷ್ಠ ಎರಡು ದಿನಗಳ ಅಳತೆ ಕಾರ್ಯದ ನಂತರ ಒಂದು ದಿನ ಪ್ರತ್ಯೇಕವಾಗಿ ದಾಖಲೆ ಸಿದ್ಧಪಡಿಸಲು ಕಾರ್ಯಕ್ರಮ ಪಟ್ಟಿ ರೂಪಿಸುವುದು. ಯಾವುದೇ ಕಾರಣಕ್ಕೂ ಎಲ್ಲಾ ಅಳತೆ ಕಾರ್ಯಗಳನ್ನು ಪೂರ್ಣಗೊಳ್ಳುವವರೆಗೂ ದಾಖಲೆ ಸಿದ್ಧಪಡಿಸುವ ಕಾರ್ಯವನ್ನು ಮುಂದೂಡಬಾರದು.
13. ಅಳತೆ ಕಾರ್ಯವನ್ನು ಸರ್ವೆ ನಂಬರಿನ ಹಕ್ಕುದಾರರು ಅಥವಾ ಅವರ ಅಧಿಕೃತ ಪ್ರತಿನಿಧಿ ಸಮಕ್ಷಮದಲ್ಲಿ ಕೈಗೊಳ್ಳುವುದು.
14. ಬಹುಮಾಲೀಕತ್ವದ ಪಹಣಿಯಲ್ಲಿನ ಕಾಲಂ ೯ ರಲ್ಲಿನ ಹಕ್ಕುದಾರರಿಗೆ ಮ್ಯುಟೇಷನ್ ಮೂಲಕ ಪ್ರತ್ಯೇಕ ವಿಸ್ತೀರ್ಣ ದಾಖಲಾಗಿದ್ದರೂ ಸಹ ತಮಗೆ ಪೋಡಿ ಬೇಡವೆಂದು ಬಹುಮಾಲೀಕತ್ವ ಪಹಣಿಯಲ್ಲಿಯೇ ಮುಂದುವರೆಸಬೇಕೆಂದು ಕಾಲಂ ೯ ರ ಎಲ್ಲಾ ಹಕ್ಕುದಾರರು ಕೋರಿದಲ್ಲಿ ಈಗಾಗಲೇ ಮ್ಯುಟೇಷನ್ ಮೂಲಕ ಪ್ರತ್ಯೇಕ ವಿಸ್ತೀರ್ಣಕ್ಕೆ ಹಕ್ಕುದಾರರಾಗಿರುವುದರಿಂದ ಪೋಡಿ ಪ್ರಕ್ರಿಯೆಗೆ ಒಳಪಡಿಸಬೇಕಾದ ಅನಿವಾರ್ಯತೆಯನ್ನು ಎಲ್ಲರಿಗೂ ಮನವರಿಕೆ ಮಾಡಿಕೊಡುವುದು. ಆದರೂ ತಮಗೆ ಪೋಡಿ ಬೇಡವೆಂದು ಸ್ಪಷ್ಟ ಪಡಿಸಿದಲ್ಲಿ ಎಲ್ಲರಿಂದಲೂ ಲಿಖಿತ ಹೇಳಿಕೆ ಪಡೆದು ಬಹುಮಾಲೀಕತ್ವದ ಪಹಣಿಯನ್ನು ಮುಂದುವರೆಸುವ ಬಗ್ಗೆ ಕಂದಾಯ ಮತ್ತು ಭೂಮಾಪನ ಅಧಿಕಾರಿಗಳನ್ನು ಒಳಗೊಂಡ ಸಮಿತಿಯು ನಿರ್ಧಾರ ಕೈಗೊಳ್ಳುವುದು.

15. ನಿಯಮಬದ್ಧವಾಗಿ ಪೋಡಿ ಪ್ರಕ್ರಿಯೆಗೆ ಒಳಪಡದೇ ಕಾಲಂ ನಂ 9 ರಲ್ಲಿ ಪ್ರತ್ಯೇಕ ಹೆಸರಿರುವ ಪೈಕಿ ಪಹಣಿಗಳನ್ನು ತಪ್ಪದೇ ಗುರುತಿಸಿ ಪೋಡಿ ದುರಸ್ತಿ ಕಾರ್ಯ ಕೈಗೊಳ್ಳುವುದು. ಇಂತಹ ಪೈಕಿ ಪಹಣಿದಾರರು ತಮಗೆ ಪೋಡಿ ಅವಶ್ಯಕತೆ ಇಲ್ಲವೆಂದು ತಿಳಿಸಿದಲ್ಲಿ ಯಾವುದೇ ಕಾರಣಕ್ಕೂ ಪೈಕಿ ಪಹಣಿಯನ್ನು ಮುಂದುವರೆಸದೇ ಸಂಬಂಧಪಟ್ಟ ಸರ್ವೆ ನಂಬರಿನ ಪೈಕಿ ಪಹಣಿದಾರರೆಲ್ಲರನ್ನೂ ಒಟ್ಟುಗೂಡಿಸಿ ಬಹುಮಾಲೀಕತ್ವದ ಪಹಣಿಯಲ್ಲಿ ಸೇರ್ಪಡೆ ಮಾಡುವುದು.
16. ಯಾವುದಾದರೂ ಸರ್ವೆ ನಂಬರುಗಳ ಮೋಜಿಣಿ ತಪ್ಪುಗಳು ಕಂಡು ಬಂದಲ್ಲಿ ವಿಳಂಬವಿಲ್ಲದೇ ಅಂತಹ ಪ್ರಕರಣಗಳನ್ನು ತಿದ್ದುಪಡಿಗಾಗಿ ಭೂದಾಖಲೆಗಳ ಉಪ ನಿರ್ದೇಶಕರು ಇವರಿಗೆ ಸಲ್ಲಿಸಿ ತಿದ್ದುಪಡಿ ಕಾರ್ಯವನ್ನು ಸಹ ಪೂರ್ಣಗೊಳಿಸುವುದು ಹಾಗೂ ಅಂತಹ ಪ್ರಕರಣಗಳಲ್ಲಿ ಅಳತೆ ಕಾರ್ಯವನ್ನು ಕೈಗೊಂಡು ಬಹುಮಾಲೀಕತ್ವದ ಪಹಣಿಯನ್ನು ಏಕಮಾಲೀಕತ್ವಕ್ಕೆ ಪರಿವರ್ತಿಸುವುದು.
17. ದುರಸ್ತಿ ಕಡತಗಳನ್ನು ಸಾಂಪ್ರದಾಯಿಕ ಪದ್ಧತಿಯಲ್ಲಿಯೇ ಸಿದ್ಧಪಡಿಸಿ ನಿರ್ವಹಿಸುವುದು.
18. ಪ್ರತಿ ಗ್ರಾಮಕ್ಕೆ ಏಳು ದಿನಗಳ ಕಾಲಾವಕಾಶ ನಿಗದಿಪಡಿಸಿದ್ದು ಸೆಪ್ಟೆಂಬರ್ 2015 ಅಂತ್ಯಕ್ಕೆ ಮೂರು ಗ್ರಾಮಗಳ ಅಳತೆ ಕಾರ್ಯ ನಿರ್ವಹಿಸಿ ವರದಿ ಸಲ್ಲಿಸುವುದು.
19. ಅಳತೆ ಸಮಯದಲ್ಲಿ ಯಾವುದೇ ವಿವಾದಗಳು ಉದ್ಭವಿಸಿದಲ್ಲಿ ಹಾಜರಿರುವ ಗ್ರಾಮ ಸಹಾಯಕರು, ಗ್ರಾಮ ಲೆಕ್ಕಿಗರು ಹಾಗೂ ಕಂದಾಯ ನಿರೀಕ್ಷಕರ ನೆರವಿನೊಂದಿಗೆ ಪರಿಹರಿಸುವುದು
20. ಮೇಲಿನ ತಂಡವು ವಿವಾದವನ್ನು ಪರಿಹರಿಸಲು ಅಸಾಧ್ಯವಾದಲ್ಲಿ ನಕ್ಷೆ ಹಾಗೂ ತಕರಾರಿನ ಸಂಬಂಧ ವಿವರವಾದ ಮಾಹಿತಿಯನ್ನು ಭೂದಾಖಲೆಗಳ ಸಹಾಯಕ ನಿರ್ದೇಶಕರಿಗೆ ಸಲ್ಲಿಸುವುದು. ಭೂದಾಖಲೆಗಳ ಸಹಾಯಕ ನಿರ್ದೇಶಕರು ನಮೂನೆ 14 ರಲ್ಲಿ ತಕರಾರು ವಹಿಯಲ್ಲಿ ಈ ಬಗ್ಗೆ ದಾಖಲಿಸಿಕೊಂಡು ಗರಿಷ್ಠ 2-3 ದಿನಗಳಲ್ಲಿ ಸ್ಥಳ ತನಿಖೆ ಮಾಡಿ ತಕರಾರಿನ ಬಗ್ಗೆ ಕರ್ನಾಟಕ ಭೂಕಂದಾಯ ನಿಯಮ 50 ರ ಹಿನ್ನೆಲೆಯಲ್ಲಿ ಮುಕ್ತ ವಿಚಾರಣೆ ಕೈಗೊಂಡು ತಮ್ಮ ನಿರ್ಧಾರವನ್ನು ಲಿಖಿತ ಆದೇಶ ನೀಡುವ ಮೂಲಕ ವಿಳಂಬವಿಲ್ಲದೇ ಕ್ರಮ ಕೈಗೊಳ್ಳುವುದು.
21. ಭೂದಾಖಲೆಗಳ ಸಹಾಯಕ ನಿರ್ದೇಶಕರು ತಕರಾರನ್ನು ಪರಿಹರಿಸುವ ಸಮಯದಲ್ಲಿ ತಕರಾರಿನ ಸ್ಥಳದ ಕಡ್ಡಾಯ ಸ್ಥಳ ಪರಿಶೀಲನೆ ನಡೆಸುವುದು. ಅಗತ್ಯವಿದ್ದಲ್ಲಿ ಗ್ರಾಮಸ್ಥರ ಸಹಕಾರ ಪಡೆಯುವುದು. ಆದರೆ ಯಾವುದೇ ಕಾರಣಕ್ಕೂ ತಕರಾರನ್ನು ಬಾಕಿ ಉಳಿಸದೇ ಭೂದಾಖಲೆಗಳ ಸಹಾಯಕ ನಿರ್ದೇಶಕರು ಲಿಖಿತ ಹಾಗೂ Speaking ಆದೇಶ ಜಾರಿಗೊಳಿಸುವುದು.
22. ಅಳತೆ ಪೂರ್ಣಗೊಂಡ ನಂತರ ಭೂಮಾಪಕರು ಸಿದ್ಧಪಡಿಸಿದ ದುರಸ್ತಿ ಕಡತಗಳನ್ನು ಈ ಯೋಜನೆಗೆ ನಿಯೋಜಿಸಲಾದ ಮತ್ತೊಬ್ಬ ಭೂಮಾಪಕರು ಪರಿಶೀಲನೆ ಮಾಡುವುದು ಹಾಗೂ ಅದೇ ದಿನದಂದು ಅಗತ್ಯ ತಿದ್ದುಪಡಿಗಳನ್ನು ಮಾಡುವುದು. ಅಂದರೆ ತಂಡದಲ್ಲಿನ ಒಬ್ಬ ಭೂಮಾಪಕರ ಅಳತೆ ಕಡತಗಳನ್ನು ಅದೇ ತಂಡದ ಮತ್ತೊಬ್ಬ ಭೂಮಾಪಕರು ಪರಿಶೀಲನಾ ಕಾರ್ಯ ಕೈಗೊಳ್ಳುವುದು. ದಾಖಲೆಗಳನ್ನು ಅಂತಿಮಗೊಳಿಸುವ ಪ್ರಕ್ರಿಯೆಯನ್ನು ಯಾವುದೇ ಕಾರಣಕ್ಕೂ ಅಳತೆಯಾದ 2 ದಿನಗಳಿಗಿಂತಲೂ ಮುಂದೂಡಬಾರದು
23. ತಾಲ್ಲೂಕಿನ ಭೂಮಾಪನ ಶಾಖೆಯ ಇಬ್ಬರು ಪರ್ಯಾವೇಕ್ಷಕರ ಪೈಕಿ ಒಬ್ಬರನ್ನು ಪರ್ಯಾವೇಕ್ಷಕರನ್ನು ಈ ಯೋಜನೆಯ ಕೆಲಸಕ್ಕಾಗಿಯೇ ಪ್ರತ್ಯೇಕವಾಗಿ ನೇಮಿಸುವುದು ಹಾಗೂ ಸದರಿ ಪರ್ಯಾವೇಕ್ಷಕರು ಅಳತೆ ಸಮಯದಲ್ಲಿ ಪ್ರತಿದಿನ ಕಡ್ಡಾಯವಾಗಿ ಗ್ರಾಮದಲ್ಲಿ ಹಾಜರಿರತಕ್ಕದ್ದು ಹಾಗೂ ಭೂಮಾಪಕರಿಗೆ ಅಗತ್ಯ ಮಾರ್ಗದರ್ಶನ ನೀಡಿ ಸಮಸ್ಯೆಗಳನ್ನು ಪರಿಹರಿಸುವುದು.

24. ಭೂಮಾಪಕರು ಹಾಗೂ ತಪಾಸಕರಿಂದ ಪರಿಶೀಲನಾ ಕಾರ್ಯ, ದುರಸ್ತಿ ಕಡತಕ್ಕೆ ಭೂದಾಖಲೆಗಳ ಸಹಾ ಕ ನಿರ್ದೇಶಕರಿಂದ ದುರಸ್ತಿ ಪಡಿಸಿ ಸಹಿಯನ್ನು ಪಡೆಯುವ ಎಲ್ಲಾ ಕಾರ್ಯಗಳು ಅಳತೆ ಕಾರ್ಯ ಪೂರ್ಣಗೊಂಡ ಎರಡು ದಿನಗಳೊಳಗಾಗಿ ಪೂರ್ಣಗೊಳಿಸುವುದು.

25. ದುರಸ್ತಿಯ ನಂತರ ತಯಾರಿಸಲಾಗುವ ನಮೂನೆ 10 ನ್ನು ಮರುದಿನವೇ ತಾಲ್ಲೂಕಿನ ಭೂಮಿ ಶಾಖೆಯಲ್ಲಿ ಕೆಲಸ ನಿರ್ವಹಿಸುವ ಕಚೇರಿ ರಾಜಸ್ವ ನಿರೀಕ್ಷಕರು ರವರಿಗೆ ಸಲ್ಲಿಸುವುದು.

26. ಭೂಮಿ ಶಾಖೆಯಲ್ಲಿ ಕೆಲಸ ನಿರ್ವಹಿಸುವ ಕಚೇರಿ ರಾಜಸ್ವ ನಿರೀಕ್ಷಕರು ರವರು ಹೊಸ ಪೋಡಿ ಮಾಹಿತಿಯನ್ನು ಗರಿಷ್ಠ 2 ದಿನಗಳ ಒಳಗಾಗಿ ಇಂಡೀಕರಿಸುವುದು ಹಾಗೂ ಹೊಸ ಪಹಣಿಗಳನ್ನು ಅಳತೆ ಪೂರ್ಣಗೊಂಡ 4 ದಿನಗಳ ಒಳಗಾಗಿ ಭೂಮಿ ಶಾಖೆಯಲ್ಲಿ ತಯಾರಿಸುವ ಬಗ್ಗೆ ಕ್ರಮ ಕೈಗೊಳ್ಳುವುದು. ಈ ಬಗ್ಗೆ ಭೂಮಿ ಉಸ್ತುವಾರಿ ಕೋಶವು ಪೋಡಿ ಮುಕ್ತ ಗ್ರಾಮದಲ್ಲಿ ಅಂತಿಮಗೊಳಿಸುವ ದುರಸ್ತಿ ದಾಖಲೆಗಳಿಗೆ ಹೊಸ ಪಹಣಿಗಳನ್ನು "ಭೂಮಿ" ತಂತ್ರಾಂಶದಿಂದ ವಿಳಂಬವಿಲ್ಲದೇ ಒದಗಿಸಲು ಅಗತ್ಯ ಕ್ರಮ ಕೈಗೊಳ್ಳುವುದು.

27. ಮುಂಚಿತವಾಗಿ ದಿನಾಂಕ ನಿಗದಿಪಡಿಸಿ ಮತ್ತೊಮ್ಮೆ ಗ್ರಾಮಸಭೆ ಏರ್ಪಡಿಸಿ ಪೋಡಿಗೆ ಒಳಪಟ್ಟು ಹೊಸದಾಗಿ ತಯಾರಿಸಲಾಗಿರುವ ಪಹಣಿಗಳನ್ನು ಮತ್ತು ದುರಸ್ತಿಯಾದ ಸರ್ವೆ ನಂಬರ್ ಅಟ್ಲಾಸ್ ಪ್ರತಿಗಳನ್ನು ಸಂಬಂಧಿಸಿದ ರೈತರಿಗೆ ಉಚಿತವಾಗಿ ವಿತರಿಸುವುದು.

**28.** ಈ ರೀತಿ ಸದರಿ ಗ್ರಾಮದ ಎಲ್ಲಾ ಬಹುಮಾಲಿಕತ್ವ ಪಹಣಿಗಳು ಒಂದೇ ಮಾಲೀಕ ಪಹಣಿಯಾಗಿ ಪೂರ್ಣಗೊಳ್ಳುವವರಿಗೆ ನಿರ್ವಹಿಸುವುದು. ಸಂಬಂಧಿಸಿದ ತಪಾಸಕರು ಹಾಗೂ ಭೂದಾಖಲೆಗಳ ಸಹಾಯಕ ನಿರ್ದೇಶಕರು ತಯಾರಿಸಲ್ಪಟ್ಟಿರುವ ಎಲ್ಲಾ ದಾಖಲೆಗಳನ್ನು ಸಂಬಂಧಿಸಿದ ಗ್ರಾಮದ ಮೂಲ ದಾಖಲೆಗಳಿಗೆ ಜಂಟಿಸುವ ಜವಾಬ್ದಾರಿಯನ್ನು ನಿರ್ವಹಿಸುವುದು.

**29. ಆರ್ ಟಿ ಸಿ ತಿದ್ದುಪಡಿಗೆ ಒಳಪಟ್ಟದ್ದಲ್ಲಿ ಈ ಕೆಳಗಿನಂತೆ ಕ್ರಮ ಜರುಗಿಸುವುದು.**

I. ಬಹುಮಾಲೀಕತ್ವ ಪಹಣಿಯು ಪೋಡಿ ಮುಕ್ತ ಅಭಿಯಾನಕ್ಕೆ ಒಳಪಟ್ಟಲ್ಲಿ, ಆರ್ ಟಿ ಸಿ ಯ ಕಾಲಂ 3 ರ ವಿಸ್ತೀರ್ಣವು ಆಕಾರಬಂದ್ ವಿಸ್ತೀರ್ಣಕ್ಕೆ ವ್ಯತ್ಯಾಸವಿದ್ದಲ್ಲಿ ಈ ಸರ್ವೆ ನಂಬರಿಗೆ ವಹಿಸಿರುವ ಕಡತದಲ್ಲಿಯೇ ಟಿಪ್ಪಣಿ ಸಿದ್ದಪಡಿಸಿ, ಆಕಾರಬಂದ್ ನ ವಿಸ್ತೀರ್ಣದಂತೆ ಅಳತೆ ಕೈಗೊಳ್ಳುವುದು. ದುರಸ್ತಿ ನಂತರ ಹೊಸ ಆರ್ ಟಿ ಸಿ ಯಲ್ಲಿ ಸರಿಯಾದ ವಿಸ್ತೀರ್ಣ ದಾಖಲಿಸುವುದರ ಬಗ್ಗೆ ವಿವರಿಸಿ,ಟಿಪ್ಪಣಿಗೆ ಅನುಮೋದನೆ ಪಡದು ಅಳತೆ ಕಾರ್ಯ ನಿರ್ವಹಿಸುವುದು.

II. ಆರ್ ಟಿ ಸಿ ಯ ಕಾಲಂ 3 ರಲ್ಲಿ ಖರಾಬು ಎ, ಖರಾಬು ಬಿ ವಿಸ್ತೀರ್ಣ ದಾಖಲಿಸಿಲ್ಲದೆ ಅಂತಹ ಸರ್ವೆ ನಂಬರ್ ಖರಾಬು ಇದ್ದಲ್ಲಿ, ಇಂತಹ ಪ್ರಕರಣಗಳನ್ನು ಕಂಡಿಕೆ (i) ರಂತೆ ಕಡತದಲ್ಲಿ ಟಿಪ್ಪಣಿಗೆ ಅನುಮೋದನೆ ಪಡೆದು ಅಳತೆ ಕಾರ್ಯ ನಿರ್ವಹಿಸುವುದು ಹಾಗೂ ದುರಸ್ತಿ ನಂತರ ನಮೂನೆ 10 ರಲ್ಲಿ ಪ್ರತಿ ಹಿಸ್ಸಾದಾರರಿಗೂ ಆಕಾರಬಂದಿನ ಖರಾಬು ವಿಸ್ತೀರ್ಣಕ್ಕೆ ಕಾಯಂ ಇಟ್ಟು ಅಳತೆ ಯಂತೆ ಪ್ರತ್ಯೇಕಿಸಿ ಇಂಡೀಕರಣಕ್ಕೆ ಸಲ್ಲಿಸುವುದು.

III. ಖರಾಬು ವಿಸ್ತೀರ್ಣವು ಎ ಅಥವಾ ಬಿ ಎಂಬುದಾಗಿ ಪ್ರತ್ಯೇಕವಾಗಿ ದಾಖಲಿಸದೇ ಆಕಾರಬಂದಿನಲ್ಲಿ ಸಿ ಕಾಲಂನಲ್ಲಿ ದಾಖಲಿಸಿದ್ದರೂ ಜಮೀನು ಸ್ಥಿತಿ ಮತ್ತು ಪ್ರತಿಬುಕ್ಕಿನ ವಿವರಗಳಂತೆ ಖರಾಬು ವಿಸ್ತೀರ್ಣವನ್ನು ಹಂಚಿಕೆ ಮಾಡಿ, ಹಿಸ್ಸಾವಾರು ನಮೂನೆ 10 ರಲ್ಲಿ ದಾಖಲಿಸಿ ಹೊಸ ಆರ್ ಟಿ ಸಿ ಯಲ್ಲಿ ಈ ಬಗ್ಗೆ ಲೋಪವಿಲ್ಲದಂತೆ ದಾಖಲಿಸುವ ಬಗ್ಗೆ ಕ್ರಮ ಜರುಗಿಸುವುದು.

ಆರ್ ಟಿ ಸಿ ಯ ಕಾಲಂ 3 ರ ವಿಸ್ತೀರ್ಣ ಕಾಲಂ 9 ರ ಬಹುಮಾಲೀಕತ್ವದ ಪ್ರತ್ಯೇಕ ವಿಸ್ತೀರ್ಣ ಒಟ್ಟುಗೂಡಿಸಿದ ಸಂದರ್ಭದಲ್ಲಿ ವಿಸ್ತೀರ್ಣವು ವ್ಯತ್ಯಾಸವಿದ್ದಲ್ಲಿ ಇಂತಹ ಆರ್ ಟಿ ಸಿ ಗಳನ್ನು ತಿದ್ದುಪಡಿಗಾಗಿ ಸಲ್ಲಿಸುವುದು ಹಾಗೂ ತಿದ್ದುಪಡಿ ನಂತರವೇ ಅಳತೆ ಕಾರ್ಯಕ್ಕೆ ಒಳಪಡಿಸುವುದು.

30. ತಕರಾರು ಪ್ರಕರಣಗಳಲ್ಲಿ ಕೈಗೊಳ್ಳಬೇಕಾದ ಕ್ರಮಗಳು :

I. ಪೋಡಿ ಪ್ರಕ್ರಿಯೆ ಸಮಯದಲ್ಲಿ ಭೂದಾಖಲೆಗಳಲ್ಲಿ ಅಂತಿಮಗೊಂಡಿರುವ ಗಡಿಗಳ ಆಧಾರವಾಗಿಯೇ ಅಳತೆ ಮಾಡುವುದು.

II. ಅಳತೆ ಸಮಯದಲ್ಲಿ ಈಗಾಗಲೇ ಅಂತಿಮಗೊಳಿಸಿರುವ ಭೂದಾಖಲೆಗಳ ಇಂಡೀಕರಣವಾಗಿರುವ ಗಡಿಗಳಂತೆ ಸ್ಥಳದಲ್ಲಿ ಅನುಭವ ವ್ಯತ್ಯಾಸವಿದ್ದಲ್ಲಿ, ದಾಖಲೆಗಳಲ್ಲಿ ನಮೂದಾಗಿರುವ ಅಳತೆಗಳಂತೆ ಮತ್ತು ವಿಸ್ತೀರ್ಣದ ಆಧಾರವಾಗಿಯೇ ಅಳತೆ ಕಾರ್ಯ ಕೈಗೊಳ್ಳುವುದು ಮತ್ತು ಅನುಭವ ಹೆಚ್ಚು ಕಡಿಮೆ ಎಂಬ ಕಾರಣಕ್ಕಾಗಿ ಅಳತ ಕೆಲಸ ನಿಲ್ಲಿಸಬಾರದು. ದಾಖಲೆಗಳ ಅಳತೆ/ವಿಸ್ತೀರ್ಣವನ್ನು ಖಾಯಂ ಇಟ್ಟುಕೊಂಡು ಅನುಭವವನ್ನು ಪರಿಗಣಿಸದೇ ಹಕ್ಕಿನ ವಿಸ್ತೀರ್ಣಕ್ಕೆ ಹೊಸ ಹಿಸ್ಸೆಯನ್ನು ವಿಂಗಡಿಸಿ ದುರಸ್ತಿಕಾರ್ಯ ಕೈಗೊಳ್ಳುವುದು.

III. ಈ ರೀತಿ ಹಕ್ಕಿನ ವಿಸ್ತೀರ್ಣಕ್ಕೆ ದುರಸ್ತಿ ಕಾರ್ಯ ಕೈಗೊಳ್ಳುವ ಸಮಯದಲ್ಲಿ ಸರ್ವೆ ನಂಬರ್ ಗಡಿಗಳಲ್ಲಿ ಬೆಲೆಬಾಳುವ ಮರ, ಬಾವಿ, ಬೋರ್‌ವೆಲ್ ಮನೆ ಇತ್ಯಾದಿ ಇದ್ದಲ್ಲಿ ಅವುಗಳ ಮಾಲೀಕರ ಹಿತಾಸಕ್ತಿ ಕಾಪಾಡಲು ಪ್ರಮಾಣಿಕ ಪ್ರಯತ್ನ ಮಾಡುವುದು. ಅನಿವಾರ್ಯವಾದಲ್ಲಿ ನೇರವಾದ ಗಡಿ ಬದಲು ಅಂಕುಡೊಂಕಾದ ಗಡಿ ಅಂದರೆ ಮರ, ಬಾವಿ, ಬೋರ್‌ವೆಲ್ ಮನೆ ಸೇರ್ಪಡೆಯಾಗುವಂತೆ ಮಾಡಿ ಬೇರೆ ಪ್ರದೇಶದಲ್ಲಿ ಬಾಬುದಾರರಿಗೆ ವಿಸ್ತೀರ್ಣ ದಾಖಲಿಸುವುದು.

IV. ಬಹುಕಾಲದ ಅನುಭವ ಎಂಬ ಕಾರಣ ನೀಡಿ ಕಾನೂನಿನಲ್ಲಿ ಅವಕಾಶವಿಲ್ಲದ ಕಾರಣ ಹಕ್ಕಿನ ವಿಸ್ತೀರ್ಣ ಹೆಚ್ಚುಗೊಳಿಸುವುದು ಅಥವಾ ಕಡಿಮೆಗೊಳಿಸುವುದು ಯಾವುದೇ ಕಾರಣಕ್ಕೂ ಕ್ರಮ ಕೈಗೊಳ್ಳಬಾರದು. ಇಂತಹ ಪ್ರಕರಣ ಕಂಡು ಬಂದಲ್ಲಿ ಗಂಭೀರವಾದ ಶಿಕ್ಷೆ ವಿಧಿಸಲು ಕ್ರಮ ಜರುಗಿಸಲಾಗುವುದು.

V. ಪರಸ್ಪರ ಒಪ್ಪಿಗೆಯ ಮೇರೆಗೆ ಅಂದರೆ ಹಿಸ್ಸೆದಾರರು ಅವರ ಅನುಭವಕ್ಕೆ ಅಳತೆ ಮಾಡಿ, ಹಕ್ಕಿನ ವಿಸ್ತೀರ್ಣ ಹೆಚ್ಚು/ಕಡಿಮೆ ಮಾಡಿಕೊಳ್ಳಲು ಗ್ರಾಮಸ್ಥರ ಸಮ್ಮುಖದಲ್ಲಿ ಭೂದಾಖಲೆಗಳ ಸಹಾಯಕ ನಿರ್ದೇಶಕರಿಗೆ ಲಿಖಿತವಾಗಿ ಒಪ್ಪಿಗೆ ನೀಡಿದಲ್ಲಿ ಅದರಂತೆ ಪೋಡಿ ಕಾರ್ಯ ಕೈಗೊಳ್ಳಲು ಇಲಾಖೆಯ ನಿಯಮಗಳಲ್ಲಿ ಅವಕಾಶವಿರುತ್ತದೆ. ಆದರೂ ಬದಲಾಗಿರುವ ಪರಿಸ್ಥಿತಿಯಲ್ಲಿ ಹಕ್ಕಿನ ವಿಸ್ತೀರ್ಣದಂತೆ ದಾಖಲೆ ಸಿದ್ಧಪಡಿಸಿ ದುರಸ್ತಿಪಡಿಸುವುದು ಸೂಕ್ತ ಎಂದು ಸ್ಪಷ್ಟಪಡಿಸಿದೆ. ಹಕ್ಕಿನ ವಿಸ್ತೀರ್ಣದಂತೆ ದಾಖಲೆ ಸಿದ್ಧಪಡಿಸಿ ದುರಸ್ತಿ ಪಡಿಸುವುದು ಸೂಕ್ತ ಎಂದು ಸ್ಪಷ್ಟಪಡಿಸಿದೆ.ಹಕ್ಕಿನ ವಿಸ್ತೀರ್ಣ ವ್ಯತ್ಯಾಸವಾದಲ್ಲಿ ದುರಸ್ತಿ ನಂತರದ ದಿನಗಳಲ್ಲಿ ತಕರಾರು ಉಂಟಾಗುವ ಸಾಧ್ಯತೆ ಇರುವುದರಿಂದ ಹಕ್ಕಿನ ವಿಸ್ತೀರ್ಣಕ್ಕೆ ಪ್ರಾಮುಖ್ಯತೆ ನೀಡುವುದು.

VI. ಭೂದಾಖಲೆಗಳ ಸಹಾಯಕ ನಿರ್ದೇಶಕರು ತಕರಾರು ಪ್ರಕರಣ ದಾಖಲೆಯಾದಲ್ಲಿ ಸ್ಥಳತನಿಖೆ ಮಾಡುವುದು ಹಾಗೂ ಭೂಮಾಪಕರು ತಯಾರಿಸಿರುವ ದಾಖಲೆಯ ವಿಸ್ತೀರ್ಣ / ಅಳತೆಗಳನ್ನು ಪರಿಶೀಲಿಸುವುದು. ಕಾಲಂ 9 ಹಕ್ಕುದಾರರ ಸಮ್ಮುಖ ಗ್ರಾಮದಲ್ಲಿ ಮುಕ್ತ ವಿಚಾರಣೆ ನಡೆಸುವುದು ಹಾಗೂ ಗ್ರಾಮದ ಹಿರಿಯರು, ಗ್ರಾಮಲೆಕ್ಕಿಗರು, ಕಂದಾಯ ನಿರೀಕ್ಷಕರು ಇವರ ಸಮ್ಮುಖದಲ್ಲಿ Summary Enquiry (ಸಂಕ್ಷಿಪ್ತ ವಿಚಾರಣೆ) ನಡೆಸಿ ವಿವಾದದ ಬಗ್ಗೆ ನ್ಯಾಯಸಮ್ಮತವಾದ ನಿರ್ಣಯವನ್ನು ಹಕ್ಕಿನ ವಿಸ್ತೀರ್ಣಕ್ಕೆ ಪ್ರಾಮುಖ್ಯತೆ ನೀಡಿ ಲಿಖಿತ ಆದೇಶ ನೀಡುವುದು ಹಾಗೂ

6 ೬ ೬

ಇದರಂತೆ ದುರಸ್ತಿ ಕ್ರಮ ಜರುಗಿಸುವುದು.ಈ ನಿರ್ಧಾರದಿಂದ ಅಸಮಾದಾನವಾದ ಹಕ್ಕುದಾರರು ಸಕ್ಷಮ ಪ್ರಾಧಿಕಾರದಲ್ಲಿ ಮೇಲ್ಮನವಿಗೆ ಅವಕಾಶವಿರುವುದರಿಂದ ಭೂದಾಖಲೆಗಳ ಸಹಾಯಕ ನಿರ್ದೇಶಕರು ವಿಳಂಬವಿಲ್ಲದೆ ತಕರಾರು ಪ್ರಕರಣಗಳನ್ನು ಇತ್ಯರ್ಥ ಪಡಿಸುವುದು.

ಆಯುಕ್ತರು
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳ ಇಲಾಖೆ
ಬೆಂಗಳೂರು 3/9/15

<u>ಪ್ರತಿಯನ್ನು :</u>

1) ಭೂದಾಖಲೆಗಳ ಹೆಚ್ಚುವರಿ ನಿರ್ದೇಶಕರು, ಕೇಂದ್ರ ಕಚೇರಿ, ಬೆಂಗಳೂರು ರವರ ಮಾಹಿತಿಗಾಗಿ.
2) ಭೂದಾಖಲೆಗಳ ಜಂಟಿ ನಿರ್ದೇಶಕರು (ವಿ ಮತ್ತು ತ) ಕೇಂದ್ರ ಕಚೇರಿ, ಬೆಂಗಳೂರು ರವರ ಮಾಹಿತಿಗಾಗಿ.
3) ಭೂದಾಖಲೆಗಳ ಜಂಟಿ ನಿರ್ದೇಶಕರು (ನಗರಮಾಪನ) ದಕ್ಷಿಣ ವಲಯ ಬೆಂಗಳೂರು ರವರ ಮಾಹಿತಿಗಾಗಿ.
4) ಭೂದಾಖಲೆಗಳ ಜಂಟಿ ನಿರ್ದೇಶಕರು (ಯುಪಿಓಆರ್) ಕೇಂದ್ರ ಕಚೇರಿ, ಬೆಂಗಳೂರು ರವರ ಮಾಹಿತಿಗಾಗಿ.
5) ಭೂದಾಖಲೆಗಳ ಉಪ ನಿರ್ದೇಶಕರು (ನಗರಮಾಪನ) ಕೇಂದ್ರ ಕಚೇರಿ, ಬೆಂಗಳೂರು ರವರ ಮಾಹಿತಿಗಾಗಿ.
6) ಭೂದಾಖಲೆಗಳ ಉಪ ನಿರ್ದೇಶಕರು (ಪಿ ಎಂ ಯು) ಕೇಂದ್ರ ಕಚೇರಿ, ಬೆಂಗಳೂರು ರವರ ಮಾಹಿತಿಗಾಗಿ.
7) ಎಲ್ಲಾ ಜಿಲ್ಲೆಯ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು ಇವರಿಗೆ ಮಾಹಿತಿ ಹಾಗೂ ಅಗತ್ಯ ಕ್ರಮಕ್ಕಾಗಿ.
8) ಎಲ್ಲಾ ಉಪವಿಭಾಗಾಧಿಕಾರಿಗಳ ಕಚೇರಿಯ ಭೂದಾಖಲೆಗಳ ಸಹಾಯಕ ನಿರ್ದೇಶಕರುಗಳಿಗೆ ಮಾಹಿತಿ ಹಾಗೂ ಅಗತ್ಯ ಕ್ರಮಕ್ಕಾಗಿ.
9) ವಿಚಾರಣಾಧಿಕಾರಿಗಳು ನಗರಮಾಪನ ತಂಡ 1,2,3, ಬೆಂಗಳೂರು ರವರ ಮಾಹಿತಿಗಾಗಿ.
10) ಭೂದಾಖಲೆಗಳ ಸಹಾಯಕ ನಿರ್ದೇಶಕರು ತಾಂತ್ರಿಕ ಶಾಖೆ, ಬೆಂಗಳೂರು ನಗರಮಾಪನ ತಂಡ 1,2 ಮತ್ತು 3 ಇವರಿಗೆ ಮಾಹಿತಿಗಾಗಿ.
11) ಅಧ್ಯಕ್ಷರು, ಕರ್ನಾಟಕ ರಾಜ್ಯ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖಾ ಕಾರ್ಯ ನಿರ್ವಾಹಕನೌಕರರ ಸಂಘ(ರಿ), ಕೆ ಆರ್ ವೃತ್ತ, ಬೆಂಗಳೂರು - 560001
12) ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ಪರವಾನಗಿ ಭೂಮಾಪಕರ ಸಂಘ(ರಿ), ಬೆಂಗಳೂರು, c/o ತೇಜಸ್ ಸರ್ವೇಸ್, ಹೊಸಳಯ್ಯ ಬಿಲ್ಡಿಂಗ್, ಹಸರುಘಟ್ಟ ಮುಖ್ಯರಸ್ತೆ, ಚಿಕ್ಕಬಾಣವರ, ಬೆಂಗಳೂರು-90
13) ಕೇಂದ್ರ ಕಚೇರಿಯ ತಾಂತ್ರಿಕ ಶಾಖೆಯ ಅಧೀಕ್ಷಕರು / ತಾಂತ್ರಿಕ ಶಾಖೆಯ ಮಾಹಿತಿಗಾಗಿ

ಪ್ರತಿಯನ್ನು ಮಾಹಿತಿಗಾಗಿ:

1) ವಿಶೇಷ ಜಿಲ್ಲಾಧಿಕಾರಿಗಳು, ಭೂಮಿ ಉಸ್ತುವಾರಿ ಕೋಶ, ಕೆ ಆರ್ ವೃತ್ತ, ಬೆಂಗಳೂರು
2) ಎಲ್ಲಾ ಉಪವಿಭಾಗಾಧಿಕಾರಿಗಳಿಗೆ ಮತ್ತು 3) ಎಲ್ಲಾ ತಹಶೀಲ್ದಾರರುಗಳಿಗೆ

Cir[illegible]

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: 2015-16ನೇ ಸಾಲಿನ- ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಹೊಸ ಯೋಜನೆಯಾದ "ಪೋಡಿ ಕಡತ ಮುಕ್ತ ಗ್ರಾಮ ಯೋಜನೆ" ಬಗ್ಗೆ.

ಓದಲಾಗಿದೆ: 1. ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಇವರ ಪತ್ರ ಸಂಖ್ಯೆ: SSLR/TNL/MIS/MIS-182/2014-15 ದಿನಾಂಕ 29.05.2015.

2. 2015-16ನೇ ಸಾಲಿನ ಆಯವ್ಯಯ ಘೋಷಣೆಯ ಕಂಡಿಕೆ ಸಂಖ್ಯೆ: 371

9-9-15

* * *

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: 1 ರಲ್ಲಿ ಓದಲಾದ ಪತ್ರದಲ್ಲಿ, 2015-16ನೇ ಸಾಲಿನ ಆರ್ಥಿಕ ವರ್ಷದಲ್ಲಿ ಭೂಮಾಪನ ಇಲಾಖೆಯಲ್ಲಿ ಕೈಗೊಳ್ಳಬಹುದಾದ ಹೊಸ ಯೋಜನೆಗಳ ಬಗ್ಗೆ-ಪೋಡಿ ಮುಕ್ತ ಗ್ರಾಮ ಯೋಜನೆಗೆ ಸಂಬಂಧಿಸಿದ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ರಾಜ್ಯದಲ್ಲಿ ಒಟ್ಟು 30,662 ಗ್ರಾಮಗಳಿದ್ದು (ಬೇಚರಾಕ್ ಗ್ರಾಮಗಳನ್ನೊಳಗೊಂಡಂತೆ), 3,18,78,750 ಸಂಖ್ಯೆಯ ಹಿಡುವಳಿದಾರರಿರುತ್ತಾರೆ. ರಾಜ್ಯದಲ್ಲಿ ಒಟ್ಟು 1,46,28,002 ಸಂಖ್ಯೆಯ ಸರ್ವೆ ನಂಬರುಗಳಿರುತ್ತವೆ. ಭೂಮಿ ಮಾಹಿತಿ ಕೋಶದಿಂದ ಪಡೆದ ಮಾಹಿತಿಯಂತೆ ರಾಜ್ಯದಲ್ಲಿ ಒಟ್ಟು 33,42,765 ಸಂಖ್ಯೆ ಬಹುಮಾಲೀಕತ್ವ ಹೊಂದಿರುವ ಪಹಣಿಗಳಿರುತ್ತವೆ. ಬಹುಮಾಲೀಕತ್ವದ ಪಹಣಿಗಳನ್ನು ಪೋಡಿ ಪ್ರಕ್ರಿಯೆಗೆ ಒಳಪಡಿಸಿ ಏಕಮಾಲೀಕತ್ವದ ಹಕ್ಕುದಾಖಲೆಗಳನ್ನು ಸಿದ್ಧಪಡಿಸಿದಲ್ಲಿ ಭೂವ್ಯಾಜ್ಯಗಳು ಗಣನೀಯವಾಗಿ ಕಡಿಮೆಯಾಗುತ್ತವೆ. ರಾಜ್ಯದಲ್ಲಿ 1,37,895 ಸಂಖ್ಯೆ ಗಡಿ ನಿಗದಿಪಡಿಸಲು ಕೋರಿ ಸಲ್ಲಿಸಿರುವ ಅರ್ಜಿಗಳು ಅಳತೆಗೆ ಬಾಕಿ ಇರುತ್ತವೆ. ಇದಲ್ಲದೇ ಸಾವಿರಾರು ಸಂಖ್ಯೆಯಲ್ಲಿ ಭೂಸ್ವಾಧೀನ ಪ್ರಕರಣಗಳು, ಭೂಪರಿವರ್ತನೆ ಪ್ರಕರಣಗಳು, ಭೂಸುಧಾರಣೆ ಪ್ರಕರಣಗಳು ಅಳತೆಗೆ ಬಾಕಿ ಇರುತ್ತವೆ. ಈ ಎಲ್ಲಾ ಹಿನ್ನೆಲೆಯಲ್ಲಿ ಒಂದು ಗ್ರಾಮದ ಬಹುಮಾಲೀಕತ್ವದ ಪಹಣಿಗಳನ್ನು ಮತ್ತು ಹಲವಾರು ವರ್ಷಗಳಿಂದ ಬಾಕಿ ಇರುವ ಕಡತಗಳನ್ನು ಶೂನ್ಯಗೊಳಿಸುವ ಮಹತ್ವಾಕಾಂಕ್ಷೆಯೊಂದಿಗೆ ಪೋಡಿ ಮುಕ್ತ ಗ್ರಾಮ ಯೋಜನೆಯನ್ನು ರಾಜ್ಯದಲ್ಲಿ ಹಂತ ಹಂತವಾಗಿ ಜಾರಿಗೆ ತರುವ ಉದ್ದೇಶದಿಂದ, 2015-16ನೇ ಸಾಲಿನಿಂದ ಹಂತ ಹಂತವಾಗಿ ಪ್ರತಿ ಗ್ರಾಮವನ್ನು ಆಯ್ಕೆ ಮಾಡಿಕೊಂಡು ಪೋಡಿರಹಿತ ಗ್ರಾಮವನ್ನಾಗಿ ಘೋಷಿಸಲು ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

ಪೋಡಿ ಮುಕ್ತ ಗ್ರಾಮ ಯೋಜನೆಯಡಿಯಲ್ಲಿ ಇಲಾಖೆಯ ದೈನಂದಿನ ಕೆಲಸಗಳ ಜೊತೆಯಲ್ಲಿ, ಈ ಯೋಜನೆಗೆ ವಿಶೇಷ ಮಹತ್ವ ನೀಡಿ ಪ್ರತಿ ತಿಂಗಳಿಗೆ ಒಂದು ತಾಲ್ಲೂಕಿನಲ್ಲಿ ಒಂದು ಗ್ರಾಮವನ್ನು ಆಯ್ಕೆ ಮಾಡಿಕೊಂಡು ಆ ಗ್ರಾಮದ ಯಾವುದೇ ರೀತಿಯ ಅಳತೆ ಪ್ರಕರಣಗಳಿದ್ದರೂ (ದರಖಾಸ್ತು ಪೋಡಿ ಕಡತಗಳನ್ನು ಹೊರತುಪಡಿಸಿ) ಅವುಗಳನ್ನು ವಿಲೇಗೊಳಿಸಿ, ಆ ಗ್ರಾಮದಲ್ಲಿ ಯಾವುದೇ ರೈತರ ಅಳತೆ ಕೆಲಸ ಬಾಕಿ ಇಲ್ಲದಂತೆ ಪೂರ್ಣಗೊಳಿಸಿ 2015-16 ನೇ ಸಾಲಿಗೆ 1250 ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಗ್ರಾಮದಲ್ಲಿ ಭೂಮಾಪನ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಗಳು ವಾಸ್ತವ್ಯ ಹೂಡಿ ಅಳತೆ ಕೆಲಸ ಮತ್ತು ದಾಖಲೆಗಳನ್ನು ಅಂತಿಮಗೊಳಿಸುವ ಕೆಲಸ ಪೂರ್ಣಗೊಳಿಸಿದ ನಂತರ ಮತ್ತೊಂದು ಗ್ರಾಮಕ್ಕೆ ಯೋಜನೆಯನ್ನು ವಿಸ್ತರಿಸಲಾಗುವುದು. ಆಯ್ಕೆ ಮಾಡಲಾದ ಗ್ರಾಮದ ಪೋಡಿ ಪ್ರಕರಣಗಳು ಅಂದರೆ ಮ್ಯುಟೇಶನ್ ಪೋಡಿ, ಮ್ಯುಟೇಶನ್ ಪೂರ್ವ ನಕ್ಷೆ (11ಇ) ಭೂ ಪರಿವರ್ತನೆ ಪೋಡಿ, ಭೂಸ್ವಾಧೀನ ಪೋಡಿ ಹಾಗೂ ಗಡಿ ವಿವಾದ ಇತ್ಯರ್ಥಪಡಿಸುವ ಹದ್ದುಬಸ್ತು ಪ್ರಕರಣಗಳ ಅಳತೆ ಕೆಲಸ ನಿರ್ವಹಿಸಿ ಯಾವುದೇ ಪ್ರಕರಣಗಳು ಬಾಕಿ ಇಲ್ಲವೆಂದು ದೃಢಪಡಿಸಿಕೊಂಡ ನಂತರ

"ಪೋಡಿ ಕಡತ ಮುಕ್ತ ಗ್ರಾಮ" ಎಂದು ಘೋಷಿಸಿ ಹೊಸ ನಕ್ಷೆಗಳನ್ನು ಮತ್ತು ಪಹಣಿಗಳನ್ನು ವಿತರಿಸಿ ಮತ್ತೊಂದು ಗ್ರಾಮವನ್ನು ಈ ಕಾರ್ಯಕ್ರಮದಲ್ಲಿ ಅಳವಡಿಸಿಕೊಳ್ಳಲಾಗುವುದು. ಪೋಡಿ ಕಡತ ಮುಕ್ತ ಗ್ರಾಮ ಯೋಜನೆಯ ಪ್ರಯೋಜನಗಳು ಈ ರೀತಿಯಾಗಿವೆ:-

1) ಹತ್ತಾರು ವರ್ಷಗಳಿಂದ ಬಾಕಿ ಇರುವ ಪೋಡಿ ಕಡತಗಳ ವಿಲೇವಾರಿ
2) ದೋಷಮುಕ್ತ ಭೂದಾಖಲೆಗಳ ನಿರ್ಮಾಣ
3) ಏಕಮಾಲೀಕತ್ವದ ಪಹಣಿ ಮತ್ತು ನಕ್ಷೆಗಳ ವಿತರಣೆ
4) ಭೂ ಸಂಬಂಧಿತ ಆಂತರಿಕ ಕಲಹ ಮುಕ್ತ ಕುಟುಂಬ
5) ಭೂ ಸಂಬಂಧಿತ ವ್ಯಾಜ್ಯ ಮುಕ್ತ ಗ್ರಾಮಗಳ ನಿರ್ಮಾಣ
6) ರೈತರು/ಸಾರ್ವಜನಿಕರು ಕಛೇರಿಗಳಿಗೆ ಅಲೆಯುವುದನ್ನು ನಿವಾರಿಸುವುದು

ಪೋಡಿ ಕಡತ ಮುಕ್ತ ಗ್ರಾಮ ಯೋಜನೆಗೆ ಈ ಕೆಳಕಂಡ ಮೂಲಭೂತ ಸೌಕರ್ಯಗಳು ಅವಶ್ಯಕವಾಗಿರುತ್ತದೆ.

1) ಕಛೇರಿ ಸ್ಥಳಾವಕಾಶ
2) ಅಗತ್ಯ-ಪೀಠೋಪಕರಣ
3) ಭದ್ರತೆ ಮತ್ತು ಸುರಕ್ಷತೆ
4) ಗಣಕಯಂತ್ರ & ಪ್ರಿಂಟರ್, ಲೇಖನ ಸಾಮಗ್ರಿಗಳು ಇತರೆ
5) ಸರ್ವೆ ಉಪಕರಣಗಳು
6) ವಾಹನ ಸೌಕರ್ಯ
7) ಅಗತ್ಯ ಸಂಖ್ಯೆಯ ಸಹಾಯಕರು
8) ಸಿಬ್ಬಂದಿಗಳಿಗೆ ಊಟ ವಸತಿ ಇತರೆ ಸಲುವಾಗಿ ವಿಶೇಷ ಭತ್ಯೆ

ಪೋಡಿ ಕಡತ ಮುಕ್ತ ಗ್ರಾಮ ಯೋಜನೆಗೆ 2015-16ನೇ ಸಾಲಿಗೆ ಲೇಖನಸಾಮಗ್ರಿಗಳ ಹಾಗೂ ಇತರೆ ವಿಷಯಗಳಿಗಾಗಿ : ರೂ. 50,000.00 ದಂತೆ ಒಟ್ಟು 1250 ಗ್ರಾಮಗಳಿಗೆ ರೂ.6.25,00,000-00 (ಆರು ಕೋಟಿ ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಅನುದಾನ ಅವಶ್ಯಕತೆ ಇರುತ್ತದೆಯೆಂದು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯಲ್ಲಿ ತಿಳಿಸಲಾಗಿದೆ. ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ. ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

## ಸರ್ಕಾರಿ ಆದೇಶ ಸಂಖ್ಯೆ:ಕಂಇ 153 ಭೂದಾಸ 2015, ಬೆಂಗಳೂರು, ದಿನಾಂಕ: 09.09.2015

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ 2015-16ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಹೊಸ ಯೋಜನೆಯಾದ "ಪೋಡಿ ಕಡತ ಮುಕ್ತ ಗ್ರಾಮ ಯೋಜನೆ" ಬಗ್ಗೆ ಅಗತ್ಯವಿರುವ ಅನುದಾನವನ್ನು "ಭೂಮಿ ಬಳಕೆದಾರರ ನಿಧಿ" (Bhoomi user charges) ಯಿಂದ ಹಾಗೂ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಲಭ್ಯವಿರುವ ಮಾನವ ಸಂಪನ್ಮೂಲ ಹಾಗೂ ಕಛೇರಿಯಲ್ಲಿ ಲಭ್ಯವಿರುವ ಕಂಪ್ಯೂಟರ್ ಹಾಗೂ ತಂತ್ರಾಂಶ ಹಾಗೂ ಇತರೆ ಅಳತೆ ಉಪಕರಣಗಳನ್ನು ಪೂರ್ಣವಾಗಿ ಬಳಸಿಕೊಂಡು ಈ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಕ್ರಮವಹಿಸಲು ಆದೇಶಿಸಿದೆ ಹಾಗೂ ಅನುದಾನ ಲಭ್ಯತೆ ಕಡಿಮೆ ಇದ್ದಲ್ಲಿ ಅನುದಾನ ಒದಗಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 595 ವೆಚ್ಚ-7/2015 ದಿನಾಂಕ 30.06.2015 ಮತ್ತು ಪರಿಯೋಜನಾ ರಚನಾ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ರವರ ಟಿಪ್ಪಣಿ ಸಂಖ್ಯೆ: ಪಿಡಿ 43 ಪಿಎಫ್‌ಬಿ 2015 ದಿನಾಂಕ 17.08.2015ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಕೆ.ನಿರಂಜನ ಮೂರ್ತಿ)
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಕಂದಾಯ ಇಲಾಖೆ (ಭೂಮಾಪನ).

ಗೆ:-

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ರವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲು ಹಾಗೂ 100 ಪ್ರತಿಗಳನ್ನು ಇಲಾಖೆಗೆ ಒದಗಿಸಲು ಕೋರಿದೆ.

ಪ್ರತಿಯನ್ನು:-

1. ಪ್ರಧಾನ ಮಹಾಲೇಖಪಾಲರು, (ಜಿ&ಎಸ್.ಎಸ್.ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560001.
2. ಪ್ರಧಾನ ಮಹಾಲೇಖಪಾಲರು, (ಇ&ಆರ್‌ಎಸ್.ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರು, (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329, ಬೆಂಗಳೂರು-560001.
4. ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು.
5. ಎಲ್ಲಾ ಪ್ರಾದೇಶಿಕ ಆಯುಕ್ತರು/ಎಲ್ಲಾ ಜಿಲ್ಲಾಧಿಕಾರಿಗಳಿಗೆ ಆಯುಕ್ತರು, ಭೂಮಾಪನ ಇಲಾಖೆ ರವರ ಮೂಲಕ.
6. ನಿರ್ದೇಶಕರು, ಪರಿಯೋಜನಾ ರಚನಾ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು
7. ಆಂತರಿಕ ಆರ್ಥಿಕ ಸಲಹೆಗಾರರು, ಕಂದಾಯ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
8. ಸರ್ಕಾರದ ಅಧೀನ ಕಾರ್ಯದರ್ಶಿ,ಆರ್ಥಿಕ ಇಲಾಖೆ(ವೆಚ್ಚ 7 & 8), ವಿಧಾನಸೌಧ, ಬೆಂಗಳೂರು
9. ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಕಂದಾಯ ಇಲಾಖೆ
10. ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-1 & ಭೂಮಾಪನ) ರವರ ಆಪ್ತ ಸಹಾಯಕರು.
11. ಸರ್ಕಾರದ ಅಧೀನ ಕಾರ್ಯದರ್ಶಿ(ಭೂಮಿ & ಯುಪಿಓಆರ್), ಕಂದಾಯ ಇಲಾಖೆ.
12. ಸಮನ್ವಯ ಶಾಖೆ/ಶಾಖಾ ರಕ್ಷಾ ಕಡತ/ಹೆಚ್ಚಿನ ಪ್ರತಿ.

ಅನುಬಂಧ-೭ LCQ 2075

ಉಡುಪಿ ಜಿಲ್ಲೆಯಲ್ಲಿ ಪೋಡಿ ಮುಕ್ತ ಗ್ರಾಮ ಯೋಜನೆಯಡಿ ಅಳತೆಗಾಗಿ ಆಯ್ಕೆ ಮಾಡಿಕೊಳ್ಳಲಾದ ಗ್ರಾಮಗಳ ವಿವರ

| ಕ್ರ.ಸ | ತಾಲ್ಲೂಕು | ಗ್ರಾಮ | ಕ್ರ.ಸ | ತಾಲ್ಲೂಕು | ಗ್ರಾಮ |
|---|---|---|---|---|---|
| 1 | ಉಡುಪಿ | ಹಿರೇಬೆಟ್ಟು | 36 | ಕಾರ್ಕಳ | ಹಿರ್ಗಾನ |
| 2 | ಉಡುಪಿ | 82-ಕುದಿ | 37 | ಕಾರ್ಕಳ | ಕೆರ್ವಾಶೆ |
| 3 | ಉಡುಪಿ | ಮರ್ಣೆ | 38 | ಕಾರ್ಕಳ | ಅಂಡಾರು |
| 4 | ಉಡುಪಿ | ಪೆರ್ಡೂಂಕಿಲ | 39 | ಕಾರ್ಕಳ | ನೂರಾಲ್ ಬೆಟ್ಟು |
| 5 | ಉಡುಪಿ | ಕೆಳಾರ್ಕಳ ಬೆಟ್ಟು | 40 | ಕಾರ್ಕಳ | ನಂದಳಿಕೆ |
| 6 | ಉಡುಪಿ | ಮಣಿಪುರ | 41 | ಕಾರ್ಕಳ | ಮುಡಾರು |
| 7 | ಉಡುಪಿ | ಮೂಡಬೆಟ್ಟು | 42 | ಕಾರ್ಕಳ | ಮುಲ್ಲಡ್ಕ |
| 8 | ಉಡುಪಿ | ಮಟ್ಟು | 43 | ಕಾರ್ಕಳ | ಪಡುಕುಡೂರು |
| 9 | ಉಡುಪಿ | ಕೋಟೆ | 44 | ಕಾರ್ಕಳ | ಮುಂಡ್ಕೂರು |
| 10 | ಉಡುಪಿ | ಇನ್ನಂಜೆ | 45 | ಕಾರ್ಕಳ | ಬೈಲೂರು |
| 11 | ಉಡುಪಿ | ಪಾಂಗಳ | 46 | ಕುಂದಾಪುರ | ಕಾಳಾವರ |
| 12 | ಉಡುಪಿ | ಮಜೂರು | 47 | ಕುಂದಾಪುರ | ಬಳ್ಕೂರು |
| 13 | ಉಡುಪಿ | ಯೇಣಗುಡ್ಡೆ | 48 | ಕುಂದಾಪುರ | ಕಂದಾವರ |
| 14 | ಉಡುಪಿ | ಉಳಿಯಾರಗೋಳಿ | 49 | ಕುಂದಾಪುರ | ಬಸ್ರೂರು |
| 15 | ಉಡುಪಿ | ತೆಂಕ | 50 | ಕುಂದಾಪುರ | ಆನಗಳ್ಳಿ |
| 16 | ಬ್ರಹ್ಮಾವರ | ಹಲುವಳ್ಳಿ | 51 | ಕುಂದಾಪುರ | ವಕ್ವಾಡಿ |
| 17 | ಬ್ರಹ್ಮಾವರ | ಮಟಪಾಡಿ | 52 | ಕುಂದಾಪುರ | ಕೋಣಿ |
| 18 | ಬ್ರಹ್ಮಾವರ | ಹಂದಾಡಿ | 53 | ಕುಂದಾಪುರ | ಉಳ್ತೂರು |
| 19 | ಬ್ರಹ್ಮಾವರ | ಬೈಕಾಡಿ | 54 | ಕುಂದಾಪುರ | ಕೇದೂರು |
| 20 | ಬ್ರಹ್ಮಾವರ | ಕುಮ್ರಗೋಡು | 55 | ಕುಂದಾಪುರ | ಅಸೋಡು |
| 21 | ಬ್ರಹ್ಮಾವರ | ಉಪ್ಪೂರು | 56 | ಕುಂದಾಪುರ | ಬೇಳೂರು |
| 22 | ಬ್ರಹ್ಮಾವರ | ಕುಕ್ಕೆಹಳ್ಳಿ | 57 | ಬೈಂದೂರು | ಹೆರಂಜಾಲು |
| 23 | ಬ್ರಹ್ಮಾವರ | ಹಾರಾಡಿ | 58 | ಬೈಂದೂರು | ಬಡಾಕೆರೆ |
| 24 | ಬ್ರಹ್ಮಾವರ | ಆರೂರು | 59 | ಬೈಂದೂರು | 11ನೇ ಉಳ್ಳೂರು |
| 25 | ಬ್ರಹ್ಮಾವರ | ನೀಲಾವರ | 60 | ಬೈಂದೂರು | ಹೇರೂರು |
| 26 | ಬ್ರಹ್ಮಾವರ | 34-ಕುದಿ | 61 | ಬೈಂದೂರು | ಶೀರೂರು |
| 27 | ಕಾರ್ಕಳ | ಕಡ್ತಲ | 62 | ಬೈಂದೂರು | ನಂದನವನ |
| 28 | ಕಾರ್ಕಳ | ಕಲ್ಯಾ | 63 | ಬೈಂದೂರು | ತಗ್ಗರ್ಸೆ |
| 29 | ಕಾರ್ಕಳ | ಪಳ್ಳಿ | 64 | ಬೈಂದೂರು | ಉಪ್ಪುಂದ |
| 30 | ಕಾರ್ಕಳ | ರೆಂಜಾಳ | 65 | ಬೈಂದೂರು | ಪಡುವರಿ |
| 31 | ಕಾರ್ಕಳ | ಜಾರ್ಕಳ | 66 | ಬೈಂದೂರು | ಕಂಬದಕೋಣೆ |
| 32 | ಕಾರ್ಕಳ | ಇರ್ವತ್ತೂರು | 67 | ಬೈಂದೂರು | ಕೆರ್ಗಾಲು |
| 33 | ಕಾರ್ಕಳ | ನೀರೆ | 68 | ಬೈಂದೂರು | ಕಿರಿಮಂಜೇಶ್ವರ |
| 34 | ಕಾರ್ಕಳ | ಕಣಜಾರು | | | |
| 35 | ಕಾರ್ಕಳ | ಸಾಣೂರು | | | |

ಅನುಬಂಧ-3 LCQ 2075

11

## ಉಡುಪಿ ಜಿಲ್ಲೆಯಲ್ಲಿ ಪೋಡಿ ಮುಕ್ತ ಗ್ರಾಮ ಯೋಜನೆಯಡಿ ಅಳತೆಗಾಗಿ ಆಯ್ಕೆ ಮಾಡಿಕೊಳ್ಳಬೇಕಾದ ಗ್ರಾಮಗಳ ವಿವರ

| ಕ್ರ.ಸ | ತಾಲ್ಲೂಕು | ಗ್ರಾಮ | ಕ್ರ.ಸ | ತಾಲ್ಲೂಕು | ಗ್ರಾಮ |
|---|---|---|---|---|---|
| 1 | ಉಡುಪಿ | ತೆಂಕನಿಡಿಯೂರು | 42 | ಕಾಪು | 100 ಪಡು |
| 2 | ಉಡುಪಿ | ಬಡಾನಿಡಿಯೂರು | 43 | ಕಾಪು | 101 ಮೂಳೂರು |
| 3 | ಉಡುಪಿ | ಅಂಬಲಪಾಡಿ | 44 | ಕಾಪು | 106 ಮಲ್ಲಾರು |
| 4 | ಉಡುಪಿ | ಕಿದಿಯೂರು | 45 | ಕಾಪು | 105 ಬೆಳಪು |
| 5 | ಉಡುಪಿ | ಕಡೆಕಾರು | 46 | ಕಾಪು | 91 ಶಿರ್ವಾ |
| 6 | ಉಡುಪಿ | ಕುತ್ಪಾಡಿ | 47 | ಕಾಪು | 89 ಬೆಳ್ಳೆ |
| 7 | ಉಡುಪಿ | ಉದ್ಯಾವರ | 48 | ಕಾಪು | 90 ಕಟ್ಟಿಂಗೇರಿ |
| 8 | ಉಡುಪಿ | 80 ಬಡಗಬೆಟ್ಟು | 49 | ಕಾಪು | 88 ಕುರ್ಕಾಲು |
| 9 | ಉಡುಪಿ | ಅತ್ರಾಡಿ | 50 | ಕಾಪು | 92 ಹೇರೂರು |
| 10 | ಉಡುಪಿ | ಅಂಜಾರು | 51 | ಕಾಪು | 107 ಪಾದೂರು |
| 11 | ಉಡುಪಿ | ಬೊಮ್ಮರಬೆಟ್ಟು | 52 | ಕಾಪು | 111 ಸಾಂತೂರು |
| 12 | ಉಡುಪಿ | ಅಲೆವೂರು | 53 | ಕಾಪು | 110 ಪಿಲಾರು |
| 13 | ಉಡುಪಿ | ಕೊರಂಗ್ರಪಾಡಿ | 54 | ಕಾಪು | 108 ಕಳತ್ತೂರು |
| 14 | ಉಡುಪಿ | ಮೂಡನಿಡಂಬೂರು | 55 | ಕಾಪು | 109 ಕುತ್ಯಾರು |
| 15 | ಉಡುಪಿ | ಹೆರ್ಗಾ | 56 | ಕಾಪು | 114 ನಡ್ಸಾಲು |
| 16 | ಉಡುಪಿ | ಶಿವಳ್ಳಿ | 57 | ಕಾಪು | 113 ಪಾದೆಬೆಟ್ಟು |
| 17 | ಉಡುಪಿ | 76 ಬಡಗಬೆಟ್ಟು | 58 | ಕಾಪು | 1 ಹೆಜಮಾಡಿ |
| 18 | ಉಡುಪಿ | ಮತ್ತೂರು | 59 | ಕಾಪು | 112 ನಂದಿಕೂರು |
| 19 | ಉಡುಪಿ | ಕೊಡವೂರು | 60 | ಕಾಪು | 115 ಫಲಿಮಾರು |
| 20 | ಉಡುಪಿ | ಬೆಳ್ಳಂಪಳ್ಳಿ | 61 | ಕಾಪು | 102 ಬಡಾ |
| 21 | ಉಡುಪಿ | ಪೆರ್ಡೂರು | 62 | ಕಾಪು | 104 ಎಲ್ಲೂರು |
| 22 | ಉಡುಪಿ | ಬೈರಂಪಳ್ಳಿ | 63 | ಕಾರ್ಕಳ | ಮರ್ಣೆ |
| 23 | ಉಡುಪಿ | 41 ಶೀರೂರು | 64 | ಕಾರ್ಕಳ | ಹೆರ್ಮುಂಡೆ |
| 24 | ಉಡುಪಿ | ಬೆಳ್ಳರಪಾಡಿ | 65 | ಕಾರ್ಕಳ | ಎರ್ಲಪಾಡಿ |
| 25 | ಉಡುಪಿ | ಮೂಡುತೋನ್ಸೆ | 66 | ಕಾರ್ಕಳ | ಶಿರ್ಲಾಲು |
| 26 | ಉಡುಪಿ | ಪಡುತೋನ್ಸೆ | 67 | ಕಾರ್ಕಳ | ಮಾಳ |
| 27 | ಬ್ರಹ್ಮಾವರ | ಚೇರ್ಕಾಡಿ | 68 | ಕಾರ್ಕಳ | ಎಳ್ಳಾರೆ |
| 28 | ಬ್ರಹ್ಮಾವರ | ಹಾವಂಜೆ | 69 | ಕಾರ್ಕಳ | ಕುಕ್ಕುಜೆ |
| 29 | ಬ್ರಹ್ಮಾವರ | 52 ಹೇರೂರು | 70 | ಕಾರ್ಕಳ | ಕೌಡೂರು |
| 30 | ಬ್ರಹ್ಮಾವರ | ಚಾಂತಾರು | 71 | ಕಾರ್ಕಳ | ನಿಂಜೂರು |
| 31 | ಬ್ರಹ್ಮಾವರ | ವಾರಂಬಳ್ಳಿ | 72 | ಕಾರ್ಕಳ | ಕಕ್ಕುಂದೂರು |
| 32 | ಬ್ರಹ್ಮಾವರ | ಪೆಜಮಂಗೂರು | 73 | ಕಾರ್ಕಳ | ನಿಟ್ಟೆ |
| 33 | ಬ್ರಹ್ಮಾವರ | ನಂಚಾರು | 74 | ಕಾರ್ಕಳ | ಕೆದಿಂಜೆ |
| 34 | ಬ್ರಹ್ಮಾವರ | ನಾಲ್ಕೂರು | 75 | ಕಾರ್ಕಳ | ಸೂಡ |
| 35 | ಬ್ರಹ್ಮಾವರ | ಕೆಂಜೂರು | 76 | ಕಾರ್ಕಳ | ಬೆಳ್ಮಣ್ |
| 36 | ಬ್ರಹ್ಮಾವರ | ಕಳ್ತೂರು 38 | 77 | ಕಾರ್ಕಳ | ಇನ್ನಾ |
| 37 | ಬ್ರಹ್ಮಾವರ | ಹೊಸೂರು | 78 | ಕಾರ್ಕಳ | ಬೋಳ |
| 38 | ಬ್ರಹ್ಮಾವರ | ಮಣೂರು | 79 | ಕಾರ್ಕಳ | ಕಾಂತಾವರ |
| 39 | ಬ್ರಹ್ಮಾವರ | ಗಿಳಿಯಾರು | 80 | ಕಾರ್ಕಳ | ಮಿಯಾರು |
| 40 | ಬ್ರಹ್ಮಾವರ | ಕೋಟತಟ್ಟು | 81 | ಕಾರ್ಕಳ | ದುರ್ಗಾ |
| 41 | ಬ್ರಹ್ಮಾವರ | ಚಿತ್ರಪಾಡಿ | 82 | ಕಾರ್ಕಳ | ಈದು |

12



ಉಡುಪಿ ಜಿಲ್ಲೆಯಲ್ಲಿ ಪೋಡಿ ಮುಕ್ತ ಗ್ರಾಮ ಯೋಜನೆಯಡಿ ಅಳತೆಗಾಗಿ ಆಯ್ಕೆ ಮಾಡಿಕೊಳ್ಳಬೇಕಾದ ಗ್ರಾಮಗಳ ವಿವರ

| ಕ್ರ.ಸ | ತಾಲ್ಲೂಕು | ಗ್ರಾಮ | ಕ್ರ.ಸ | ತಾಲ್ಲೂಕು | ಗ್ರಾಮ |
|---|---|---|---|---|---|
| 83 | ಬ್ರಹ್ಮಾವರ | ಪಾರಂಪಳ್ಳಿ | 125 | ಕಾರ್ಕಳ | ನಲ್ಲೂರು |
| 84 | ಬ್ರಹ್ಮಾವರ | ಕಾರ್ಕಡ | 126 | ಕಾರ್ಕಳ | ಕಾರ್ಕಳ |
| 85 | ಬ್ರಹ್ಮಾವರ | ಗುಂಡ್ಮಿ | 127 | ಹೆಬ್ರಿ | ಬೆಳಂಜೆ |
| 86 | ಬ್ರಹ್ಮಾವರ | ಕೋಡಿ | 128 | ಹೆಬ್ರಿ | ಕುಚ್ಚೂರು |
| 87 | ಬ್ರಹ್ಮಾವರ | ಐರೋಡಿ | 129 | ಹೆಬ್ರಿ | ಹೆಬ್ರಿ |
| 88 | ಬ್ರಹ್ಮಾವರ | ಬಾಳ್ಕುದ್ರು | 130 | ಹೆಬ್ರಿ | ಚಾರಾ |
| 89 | ಬ್ರಹ್ಮಾವರ | ಪಾಂಡೇಶ್ವರ | 131 | ಹೆಬ್ರಿ | ಶಿವಪುರ |
| 90 | ಬ್ರಹ್ಮಾವರ | ಮೂಡಹಡು | 132 | ಹೆಬ್ರಿ | ಕೆರೆಬೆಟ್ಟು |
| 91 | ಬ್ರಹ್ಮಾವರ | ಹೊಸಾಳ | 133 | ಹೆಬ್ರಿ | ಮುದ್ರಾಡಿ |
| 92 | ಬ್ರಹ್ಮಾವರ | ಕಚ್ಚೂರು | 134 | ಹೆಬ್ರಿ | ಕಬ್ಬಿನಾಲೆ |
| 93 | ಬ್ರಹ್ಮಾವರ | ಹನೇಹಳ್ಳಿ | 135 | ಹೆಬ್ರಿ | ನಾಡ್ಪಾಲು |
| 94 | ಬ್ರಹ್ಮಾವರ | ಹೇರಾಡಿ | 136 | ಹೆಬ್ರಿ | ವರಂಗ |
| 95 | ಬ್ರಹ್ಮಾವರ | ಯಡ್ತಾಡಿ | 137 | ಹೆಬ್ರಿ | ಬೆಳ್ವೆ |
| 96 | ಬ್ರಹ್ಮಾವರ | ಬನ್ನಾಡಿ | 138 | ಹೆಬ್ರಿ | ಅಲ್ಬಾಡಿ |
| 97 | ಬ್ರಹ್ಮಾವರ | ಕಾವಡಿ | 139 | ಹೆಬ್ರಿ | ಶೇಡಿಮನೆ |
| 98 | ಬ್ರಹ್ಮಾವರ | ವಡ್ಡರ್ಸೆ | 140 | ಹೆಬ್ರಿ | ಮಡಾಮಕ್ಕಿ |
| 99 | ಬ್ರಹ್ಮಾವರ | ಅಚ್ಲಾಡಿ | 141 | ಕುಂದಾಪುರ | ಗಂಗೊಳ್ಳಿ |
| 100 | ಬ್ರಹ್ಮಾವರ | ಶಿರಿಯಾರ | 142 | ಕುಂದಾಪುರ | ಉಪ್ಪಿನಕುದ್ರು |
| 101 | ಬ್ರಹ್ಮಾವರ | ನಡೂರು | 143 | ಕುಂದಾಪುರ | ತಲ್ಲೂರು |
| 102 | ಬ್ರಹ್ಮಾವರ | ಕಾಡೂರು | 144 | ಕುಂದಾಪುರ | ಹೆಮ್ಮಾಡಿ |
| 103 | ಬ್ರಹ್ಮಾವರ | ಹೆಗ್ಗುಂಜೆ | 145 | ಕುಂದಾಪುರ | ಕಟ್ಟಬೆಲ್ತೂರು |
| 104 | ಬ್ರಹ್ಮಾವರ | 33 ಶೀರೂರು | 146 | ಕುಂದಾಪುರ | ದೇವಲ್ಕುಂದ |
| 105 | ಬ್ರಹ್ಮಾವರ | ಬಿಲ್ಲಾಡಿ | 147 | ಕುಂದಾಪುರ | ಹಟ್ಟಿಯಂಗಡಿ |
| 106 | ಬ್ರಹ್ಮಾವರ | ವಂಡಾರು | 148 | ಕುಂದಾಪುರ | ಕನ್ಯಾನ |
| 107 | ಬ್ರಹ್ಮಾವರ | ಕಕ್ಕುಂಜೆ | 149 | ಕುಂದಾಪುರ | ಕೆಂಚನೂರು |
| 108 | ಬ್ರಹ್ಮಾವರ | ಆವರ್ಸೆ | 150 | ಕುಂದಾಪುರ | ಕರ್ಕುಂಜೆ |
| 109 | ಬ್ರಹ್ಮಾವರ | ಹಿಲಿಯಾಣ | 151 | ಕುಂದಾಪುರ | ಗುಲ್ವಾಡಿ |
| 110 | ಕುಂದಾಪುರ | ಕುಂದಾಪುರ | 152 | ಕುಂದಾಪುರ | ಹಳ್ನಾಡು |
| 111 | ಕುಂದಾಪುರ | ವಡೇರಹೋಬಳಿ | 153 | ಕುಂದಾಪುರ | ಕಾವ್ರಾಡಿ |
| 112 | ಕುಂದಾಪುರ | ಹಂಗಳೂರು | 154 | ಕುಂದಾಪುರ | ಶಂಕರನಾರಾಯಣ |
| 113 | ಕುಂದಾಪುರ | ಕೋಟೇಶ್ವರ | 155 | ಕುಂದಾಪುರ | ಕುಳಂಜೆ |
| 114 | ಕುಂದಾಪುರ | ಬೀಜಾಡಿ | 156 | ಕುಂದಾಪುರ | ಅಂಪಾರು |
| 115 | ಕುಂದಾಪುರ | ಗೋಪಾಡಿ | 157 | ಕುಂದಾಪುರ | ಕೊಡ್ಲಾಡಿ |
| 116 | ಕುಂದಾಪುರ | ಕುಂಭಾಶಿ | 158 | ಕುಂದಾಪುರ | ಆಜ್ರಿ |
| 117 | ಕುಂದಾಪುರ | ತೆಕ್ಕಟ್ಟೆ | 159 | ಕುಂದಾಪುರ | ಸಿದ್ದಾಪುರ |
| 118 | ಕುಂದಾಪುರ | ಹೆಸ್ಕತ್ತೂರು | 160 | ಕುಂದಾಪುರ | 74 ಉಳ್ಳೂರು |
| 119 | ಕುಂದಾಪುರ | ಕೊರ್ಗಿ | 161 | ಕುಂದಾಪುರ | ಹೊಸಂಗಡಿ |
| 120 | ಕುಂದಾಪುರ | ಜಪ್ತಿ | 162 | ಕುಂದಾಪುರ | ಯಡಮೊಗೆ |
| 121 | ಕುಂದಾಪುರ | ಹೊಂಬಾಡಿ ಮಂಡಾಡಿ | 163 | ಕುಂದಾಪುರ | ಸೇನಾಪುರ |
| 122 | ಕುಂದಾಪುರ | ಯಡ್ಯಾಡಿ ಮತ್ಯಾಡಿ | 164 | ಕುಂದಾಪುರ | ಕಮಲಶಿಲೆ |
| 123 | ಕುಂದಾಪುರ | ಮೊಳಹಳ್ಳಿ | 165 | ಕುಂದಾಪುರ | ಹಕ್ಲಾಡಿ |
| 124 | ಕುಂದಾಪುರ | ಹಾರ್ದಳ್ಳಿ ಮಂಡಳ್ಳಿ | 166 | ಕುಂದಾಪುರ | ತ್ರಾಸಿ |

## ಉಡುಪಿ ಜಿಲ್ಲೆಯಲ್ಲಿ ಪೋಡಿ ಮುಕ್ತ ಗ್ರಾಮ ಯೋಜನೆಯಡಿ ಅಳತೆಗಾಗಿ ಆಯ್ಕೆ ಮಾಡಿಕೊಳ್ಳ ಬೇಕಾದ ಗ್ರಾಮಗಳ ವಿವರ

| ಕ್ರ.ಸ | ತಾಲ್ಲೂಕು | ಗ್ರಾಮ | ಕ್ರ.ಸ | ತಾಲ್ಲೂಕು | ಗ್ರಾಮ |
|---|---|---|---|---|---|
| 167 | ಕುಂದಾಪುರ | ಹಳ್ನಾಡಿ ಹರ್ಕಾಡಿ | 184 | ಕುಂದಾಪುರ | ಹೊಸಾಡು |
| 168 | ಕುಂದಾಪುರ | ಹಾಲಾಡಿ 28 | 185 | ಕುಂದಾಪುರ | ಗುಜ್ಜಾಡಿ |
| 169 | ಕುಂದಾಪುರ | ಹಾಲಾಡಿ 76 | 186 | ಬೈಂದೂರು | ಯಡ್ತರೆ |
| 170 | ಕುಂದಾಪುರ | ಹೆಂಗವಳ್ಳಿ | 187 | ಬೈಂದೂರು | ಬೈಂದೂರು |
| 171 | ಕುಂದಾಪುರ | ರಟ್ಟಾಡಿ | 188 | ಬೈಂದೂರು | ಬಿಜೂರು |
| 172 | ಕುಂದಾಪುರ | ಅಮಾಸೆಬೈಲು | 189 | ಬೈಂದೂರು | ನಾವುಂದ |
| 173 | ಕುಂದಾಪುರ | ಮಚ್ಚಟ್ಟು | 190 | ಬೈಂದೂರು | ಮರವಂತೆ |
| 174 | ಕುಂದಾಪುರ | ಕೆರಾಡಿ | 191 | ಬೈಂದೂರು | ಹಡವು |
| 175 | ಕುಂದಾಪುರ | ಬೆಳ್ಳಾಲ | 192 | ಬೈಂದೂರು | ನಾಡ |
| 176 | ಕುಂದಾಪುರ | ಹೊಸೂರು | 193 | ಬೈಂದೂರು | ಕಾಲ್ತೋಡು |
| 177 | ಕುಂದಾಪುರ | ಇಡೂರು ಕುಂಜ್ಞಾಡಿ | 194 | ಬೈಂದೂರು | ಗೋಳಿಹೊಳೆ |
| 178 | ಕುಂದಾಪುರ | ಚಿತ್ತೂರು | 195 | ಬೈಂದೂರು | ಯಳಜಿತ್ |
| 179 | ಕುಂದಾಪುರ | ಆಲೂರು | 196 | ಬೈಂದೂರು | ಕೊಲ್ಲೂರು |
| 180 | ಕುಂದಾಪುರ | ಹರ್ಕೂರು | 197 | ಬೈಂದೂರು | ಜಡ್ಕಲ್ |
| 181 | ಕುಂದಾಪುರ | ವಂಡ್ಸೆ | 198 | ಬೈಂದೂರು | ಮುದೂರು |
| 182 | ಕುಂದಾಪುರ | ನೂಜಾಡಿ | 199 | ಬೈಂದೂರು | ಹಳ್ಳಿಹೊಳೆ |
| 183 | ಕುಂದಾಪುರ | ಕುಂದಬಾರ ದಾಡಿ | | | |